(10)

# ಅಚಲ

ಮಾರ್ಚ್, 1992 ಬೆಲೆ ರೂ. 2-50





ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಸಂಪುಟ 8 ಸಂಚಿಕೆ 6

"ಅಚಲ" ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನಾರು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು, ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವೈಯಾಲಿ ಕಾವಲ್
ಬೆಂಗಳೂರು–560 003.

---

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

---

ಸಂಪಾದಕ ಮಂಡಳಿ :

ಎನ್. ಗಾಯತ್ರಿ, ನೇಮಿಚಂದ್ರ,
ಡಾ|| ಬಿ. ಎನ್. ಸುಮಿತ್ರಾಬಾಯಿ

---

ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 15–00 |
| ಬಿಡಿ ಪ್ರತಿ | : | ರೂ. 2–00 |
| ವಿಶೇಷ ಪ್ರತಿ | : | ರೂ. 5–00 |
| ಆಜೀವ ಚಂದಾ | | |
| ವ್ಯಕ್ತಿಗಳಿಗೆ | : | ರೂ. 150–00 |
| ಸಂಸ್ಥೆಗಳಿಗೆ | : | ರೂ. 200–00 |

Printed at : PRINTSWELL, 78, 3rd Main Road Nagappa Block, Srirampuram, Bangalore-21 & Published by Dr. G Ramakrishna on behalf of Jagruthi Mahila Adhyayana Kendra
26, I Main, Vyalkaval, Bangalore-560003.
Editor : N. GAYATRI

## ಕೃತಜ್ಞತೆಗಳು

ಅಚಲದ ಹಿತೈಷಿಗಳಲ್ಲೊಬ್ಬರಾದ ಶ್ರೀ ವೈ.ಆರ್. ಸತ್ಯವಿಜಯಂರವರು ಪತ್ರಿಕೆಗೆ 3000 ರೂಗಳನ್ನು ನೀಡಿ ನಾವು ಆಯ್ಕೆ ಮಾಡಿದ ಹದಿನೈದು ಸಂಸ್ಥೆಗಳಿಗೆ ಪತ್ರಿಕೆಯನ್ನು ಕಳುಹಿಸಲು ಸೂಚಿಸಿದ್ದಾರೆ. ಶ್ರೀ ಸತ್ಯವಿಜಯಂರವರಿಗೆ ಅಚಲದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

"ಅಚಲ"ದ ಬೆಳವಣಿಗೆಗೆ ನಮ್ಮ ಹಿತೈಷಿಗಳು ಹೀಗೆ ಉದಾರವಾಗಿ ಧನ ಸಹಾಯ ಮಾಡಿ ಪ್ರೋತ್ಸಾಹಿಸಬೇಕೆಂದು ವಿನಂತಿಸುತ್ತೇವೆ.



ಆರ್. ಕಲ್ಯಾಣಮ್ಮನವರ ಜನ್ಮ ಶತಮಾನೋತ್ಸವ ನೆನಪಿಗಾಗಿ ಹೊರ ತಂದಿರುವ ಈ ವಿಶೇಷ ಸಂಚಿಕೆಯ ಬಹುಪಾಲು ಲೇಖನಗಳನ್ನು ಸಿದ್ಧಪಡಿಸಿಕೊಟ್ಟವರು ಡಾ|| ಬಿ. ಎನ್. ಸುಮಿತ್ರಾಬಾಯಿಯವರು. ಇದಕ್ಕಾಗಿ ಅವರಿಗೆ ಕೃತಜ್ಞತೆಗಳು.

ಈ ಸಂಚಿಕೆಯಿಂದ ಶ್ರೀಮತಿ ಬಿ.ಎನ್. ಸುಮಿತ್ರಾಬಾಯಿಯವರು "ಅಚಲ" ಸಂಪಾದಕ ಬಳಗಕ್ಕೆ ಸೇರುತ್ತಾರೆಂಬುದನ್ನು ಸಂತಸದಿಂದ ಪ್ರಕಟಿಸುತ್ತಿದ್ದೇವೆ.

— ಸಂಪಾದಕಿ

# ಹುಸಿ ಪ್ರಜಾಪ್ರಭುತ್ವದ ಗುಲಾಮಗಿರಿಗೆ

ಏಳು ವರ್ಷಗಳನ್ನು ದಾಟಿದ "ಅಚಲ"ದ ಮುಂದೆ ಈಗ ಹೊಸ ವರ್ಷ ಬಂದಿದೆ. ಈ ಸಂದರ್ಭದಲ್ಲಿ ನಮ್ಮನ್ನೆಲ್ಲಾ ತೀವ್ರವಾಗಿ ಕಾಡುತ್ತಿರುವ ಮುಖ್ಯ ಪ್ರಶ್ನೆ : ನಮ್ಮ ಭವಿಷ್ಯ ಮುಂದೆ ಏನಾಗಬಲ್ಲದು? ಈಗಿರುವ ಪರಿಸ್ಥಿತಿಯಲ್ಲಿ ನಾವು ಸುಂದರವಾದ ಕನಸುಗಳನ್ನು ಕಾಣಬಲ್ಲೆವೇ ? ನೂರಾರು ವರ್ಷಗಳ ದಾಸ್ಯದಲ್ಲಿ ನೊಂದು ದನಿ ಕಳೆದುಕೊಂಡಿದ್ದ ಭಾರತದಲ್ಲಿ ದೀರ್ಘ ಹೋರಾಟದ ಮೂಲಕ ಪರಕೀಯರನ್ನು ದೇಶ ಬಿಟ್ಟು ತೊಲಗಿಸಿದುದು ವಾಸ್ತವ ಸತ್ಯವೇ ಆದರೂ ಇಂದು ಪರಕೀಯ ಆಳ್ವಿಕೆ ಬೇರೊಂದು ರೂಪದಲ್ಲಿ ದೇಶವನ್ನು ಹೊಕ್ಕಿರುವುದೂ ಅದೇ ಕಹಿ ಸತ್ಯದ ಇನ್ನೊಂದು ಮುಖ. ಸ್ವಾತಂತ್ರ್ಯ ಪಡೆದು 45 ವರ್ಷಗಳಾಗಿ, ವಿಶ್ವದ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಬಹುಮುಖ್ಯರಾದವರು ಎನಿಸಿಕೊಂಡ ನಾವು ಈ ವ್ಯವಸ್ಥೆಯ ಇತ್ಯಾತ್ಮಕ ಅಂಶಗಳನ್ನು ಅನುಭವಿಸಿಯೇ ಇಲ್ಲ. ರಾಜಕೀಯ ಸ್ವಾತಂತ್ರ್ಯದ ಫಲಿತಗಳು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ದಾಸ್ಯದಲ್ಲಿದ್ದ ನಮ್ಮ ಬೃಹತ್ ಜನ ಸಮುದಾಯವನ್ನು ಮುಟ್ಟಲೇ ಇಲ್ಲ. ದೇಶದ ಸ್ವಾಯಂತ್ರತೆ, ಸಾರ್ವಭೌಮತ್ವಕ್ಕೆ ಧಕ್ಕೆಯೊದಗಿರುವ ಈ ಸಂದರ್ಭದಲ್ಲಿ ನಾವು ಪ್ರಗತಿಗೆ ಹಿಮ್ಮುಖವಾಗಿರುವುದು ಶೋಚನೀಯವೇ ಸರಿ.

ಕಳೆದ ವರ್ಷದಲ್ಲಿ ನಡೆದ ರಾಷ್ಟ್ರೀಯ, ಅಂತರರಾಷ್ಟ್ರೀಯ ಘಟನೆಗಳು ಇಡೀ ದೇಶದ ಜನತೆಯ ಬದುಕಿನ ಮೇಲೆ ಮಹತ್ತರವಾದ ಆಘಾತಗಳನ್ನು ಒಡ್ಡಿದೆ. ಜನಜೀವನವನ್ನು ಅಲುಗಾಡಿಸಿದೆ. ಭಯಂಕರ ಹತ್ಯೆಗೆ ಗುರಿಯಾದ ಮಾಜಿ ಪ್ರಧಾನಿ ರಾಜೀವರ ಸಾವಿನಿಂದಾಗಿ ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಧಿಮಾಕಿನಿಂದ ಆಳಿದ ಏಕ ಕುಟುಂಬದ ಪಾರುಪತ್ಯ ಕೊನೆಗೊಂಡಿತೆಂಬಂತೆ ಗೋಚರಿಸಿತಾದರೂ ಆ ವಂಶವು ಬಿತ್ತಿದ ಬೀಜಗಳು ಇಂದು ವಿಷವೃಕ್ಷಗಳಾಗಿ ದೇಶದಲ್ಲಿ ಹಾಲಾಹಲವನ್ನೇ ಸೃಷ್ಟಿಸಿವೆ. ಐ.ಎಂ.ಎಫ್, ಸಾಲಕ್ಕಾಗಿ ದೇಶವನ್ನೇ ಹರಾಜಿಗಿಟ್ಟಿರುವ ಇಂದಿನ ಆಡಳಿತ ಸರ್ಕಾರ "ಹೊಸ ಆರ್ಥಿಕ ನೀತಿ"ಯ ಘೋಷಣೆಯಡಿ ದೇಶವನ್ನು ದಿವಾಳಿಯೆಬ್ಬಿಸಲು ಹೊರಟಿದೆ.

ವಿದೇಶೀ ವಿನಿಮಯ ಹತೋಟಿ ಕಾನೂನು ಅಥವಾ ಫೆರಾದಡಿ ಭಾರತೀಯ ಬಂಡವಾಳಗಾರರ ಮೇಲೆ ಹಾಕಲಾಗಿದ್ದ ಶರತ್ತುಗಳನ್ನು ಗಾಳಿಗೆ ತೂರಲಾಗಿವೆ. "ಹೊಸ ವಿಶ್ವ ವ್ಯವಸ್ಥೆ" ಯಲ್ಲಿ ಸ್ವಾತಂತ್ರ್ಯ, ಸ್ವಾಭಿಮಾನ ಎನ್ನುವುದು ದುಬಾರಿ ವಸ್ತುಗಳಾಗಿದೆ. ಬಜೆಟ್ ಖೋತಾವನ್ನು ಶೇ.6.5ಕ್ಕೆ ಇಳಿಸಬೇಕೆನ್ನುವ ಐ.ಎಂ.ಎಫ್, ಬಯಕೆ ಈಡೇರಿಸುವ ಸಲುವಾಗಿ ರೈಲ್ವೆ ವಲಯಕ್ಕೆಂದು ಮೀಸಲಿಟ್ಟ ಹಣವನ್ನು 1672 ಕೋಟಿ ರೂಗಳಿಂದ 1100 ಕೋಟಿ ರೂಗಳಿಗೆ ಇಳಿಸಲಾಗಿರುವುದಲ್ಲದೆ, ಇದರಿಂದ ರೈಲ್ವೇ ಸಾಗಾಣಿಕೆ ಮತ್ತು ಪ್ರಯಾಣ ದರದ ಮೇಲೆ ತೀವ್ರ ಪರಿಣಾಮ ಉಂಟಾಗಿ ಅಕ್ಕಿ, ಗೋಧಿ ಮುಂತಾದ ಆಹಾರ ಧಾನ್ಯಗಳು, ಪಡಿತರ ವ್ಯವಸ್ಥೆಯಲ್ಲಿ ಹಂಚಲ್ಪಡುವ ಆಹಾರ ವಸ್ತುಗಳ ಬೆಲೆಯೂ ಗಗನಕ್ಕೇರಿ ಬದುಕು ದುರ್ಭರವಾಗಲಿದೆ.

ಐ.ಎಂ.ಎಫ್.ನವರು ನೀಡಿರುವ ಹುಸಿ ಪ್ರಜಾಪ್ರಭುತ್ವದ ಪರಿಕಲ್ಪನೆಯಲ್ಲಿ ಸಂತೃಪ್ತರಾದ ಅಧಿಕಾರದಲ್ಲಿರುವ ಆಡಳಿತದ ಮಂದಿ ದೊಡ್ಡ ಬಿಕ್ಷಾಪಾತ್ರೆಯನ್ನು ಹಿಡಿದು "ಅಂತರರಾಷ್ಟ್ರೀಯ" ನೆಲೆಯಲ್ಲಿ ಬಿಕ್ಷಾವೃತ್ತಿಗಿಳಿದಿದ್ದಾರೆ. ಈ ಪ್ರವೃತ್ತಿಗಳ ವಿರುದ್ಧ ನಾಡಿನಾದ್ಯಂತ ನಡೆಯುತ್ತಿರುವ ಪ್ರತಿಭಟನಾ ಸಭೆ, ಮುಷ್ಕರಗಳು ಆಳುವವರ ದಪ್ಪ ಚರ್ಮಕ್ಕೆ ತಾಗುತ್ತಲೇ ಇಲ್ಲ. ಬ್ಯಾಂಕ್ ಸರ್ಕಾರಿ ಉದ್ದಿಮೆಗಳನ್ನು

ಖಾಸಗೀಕರಣಕ್ಕೊಳ್ಳಪಡಿಸುವುದು ರಿಟ್ರೀಚ್‌ಮೆಂಟ್ ತಂತ್ರಗಳು ದುಡಿಯುವ ಶಕ್ತಿಗೆ ಬಾರೀ ಪ್ರಹಾರವನ್ನೇ ಒದಗಿಸುತ್ತಿವೆ. ಕಪ್ಪು ಹಣದ ಕಳ್ಳ ಕದೀಮರನ್ನು ಶಿಕ್ಷಿಸಲು ಆಗದಿದ್ದರೂ, ವೇತನದಾರರ ಜೇಬಿಗೆ ಕತ್ತರಿ ಹಾಕುವ ಕೆಲಸದಲ್ಲಿ ಸರ್ಕಾರ ಮುಂದಾಗಿದೆ.

ಈ ಎಲ್ಲಾ ಹೊಸ ಆರ್ಥಿಕ ದುರವಸ್ಥೆಗಳ ಜೊತೆ ಜೊತೆಯಲ್ಲೇ ಹಳೆಯ ಹುಣ್ಣುಗಳು ಮಾಯದೆ ನೋವು ಕೊಡುತ್ತಿವೆ. ಪಂಜಾಬಿನಲ್ಲಿ ದಿನನಿತ್ಯ ನಡೆಯುವ ಭಯೋತ್ಪಾದಕತೆಯ ಆಘಾತಗಳು, ತ್ರಿಪುರಾದ ಗುಡ್ಡಗಾಡು ಜನಗಳ ಮೇಲೆ ನಡೆಯುತ್ತಿರುವ ದುರಾಕ್ರಮಣ, ಬಿಹಾರದಲ್ಲಿ ನಿತ್ಯ ಸುದ್ದಿಯಾಗಿರುವ ಹರಿಜನರ ಮಾರಣ ಹೋಮ ಇವು ದೇಶದ ಸ್ಥಿರತೆಯನ್ನು ಅಲುಗಾಡಿಸಿವೆ. ಗಂಭೀರ ಸಮಸ್ಯೆಯಾಗಿ ಪರಿಣಮಿಸಿರುವ ಕಾವೇರಿ ಜಲ ವಿವಾದವು ಅಧಿಕಾರಸ್ಥ ರಾಜಕೀಯ ಮುಖಂಡರ ಅಸ್ತಿತ್ವದ ಹೋರಾಟದ ಕಾರಣಕ್ಕಾಗಿ ಪರಿಹಾರ ಕಾಣದೆ ಸಾರ್ವಜನಿಕ ಶಾಂತಿ, ಸಂಪತ್ತಿಗೆ ಧಕ್ಕೆ ತಂದಿದೆ. ಇಂತಹ ಗಂಭೀರ ಪರಿಸ್ಥಿತಿಯಲ್ಲಿ ಜನತೆಯು ನಿಷ್ಕ್ರಿಯತೆಯನ್ನು ಕೊಡವಿ ಜಾಗೃತವಾಗಿ ದೇಶವನ್ನು ನಿಜವಾದ ಅರ್ಥದಲ್ಲಿ ಸ್ವತಂತ್ರಗೊಳಿಸಬೇಕಾಗಿದೆ.

## ಸಾರ್ಥಕ ಬದುಕು

ಭಾರತೀಯ ಮಹಿಳೆಯರಿಗೆ ವೈಧವ್ಯ ಮಹಾಶಾಪವಾಗಿದ್ದ ಕಾಲವದು; ವೈಧವ್ಯದ ಕ್ರೂರ ಆಚರಣೆಗಳಲ್ಲಿ ಕೋಮಲವಾದ, ಸೂಕ್ಷ್ಮ ಚೇತನವೊಂದು ಮುರುಟಿಹೋಗದೆ ತನ್ನಲ್ಲಿದ್ದ ಅಂತಸ್ಸತ್ವದಿಂದಾಗಿ ಮಹಾ ಪ್ರತಿಭೆಯಾಗಿ ಬೆಳಗಿ ತನ್ನ ಸುತ್ತಲ ಪರಿಸರಕ್ಕೂ ಬೆಳಕು ನೀಡಿತು. ಆ ಚೇತನವೇ ಬೆಂಗಳೂರಿನ ದಿವಂಗತ ಆರ್. ಕಲ್ಯಾಣಮ್ಮ. ಬೆಂಗಳೂರಿನ ಮಣ್ಣಿನ ಕಣ ಕಣದಲ್ಲಿ ಬೆರತು ಹೋದ ಈ ಮಹಾ ಜೀವ ಸಾಹಿತ್ಯ, ಸ್ತ್ರೀ ಸುಧಾರಣೆ, ಪತ್ರಿಕೋದ್ಯಮ, ರಾಜಕೀಯ ಸಾರ್ವಜನಿಕ ಸೇವೆಗಳೆಲ್ಲದರಲ್ಲೂ ಮಹಿಳೆಯರು ಸಮರ್ಥರಾಗಿ ದುಡಿಯಬಲ್ಲರೆಂಬುದನ್ನು ಸ್ವತಃ ಬದುಕಿ ತೋರಿಸಿ ಧನ್ಯವಾಗಿದೆ. ಅಷ್ಟೇ ಅಲ್ಲ ಕಲ್ಯಾಣಮ್ಮನವರ ಬದುಕು-ಕೃತಿಗಳು ಹಾಗೂ ಇವುಗಳ ಪ್ರಭಾವ ಕರ್ನಾಟಕದ ಮೂಲೆ ಮೂಲೆಗೂ ಹರಡಿ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಾಸದೆ ಸ್ಥಿರವಾಗಿದೆ.

ಸಂಪ್ರದಾಯಸ್ಥ ಕುಟುಂಬದಲ್ಲೇ ಜನಿಸಿದರೂ, ಕಲ್ಯಾಣಮ್ಮನವರು ಪಡೆದುಕೊಂಡ ಶಿಕ್ಷಣ ಮತ್ತು ಸ್ವಾಧ್ಯಾಯದಿಂದಾಗಿ ಅಂದಿನ ಪೀಳಿಗೆಯವರಿಗಿಂತ ಹೆಚ್ಚು ಪ್ರಗತಿಪರರಾಗಿ ಚಿಂತಿಸಿದರು. ಅಷ್ಟೇ ಅಲ್ಲ ತಮ್ಮ ಬದುಕನ್ನು ಸಾಮಾಜಿಕವಾಗಿ ವಿಶಾಲ ಆಯಾಮ ಪಡೆಯುವಂತೆ ಬೆಳೆಸಿಕೊಂಡರು. ಪ್ರಗತಿಪರವಾದ ವಿಚಾರಗಳತ್ತ ತೆರೆದುಕೊಳ್ಳಬಲ್ಲ ಬದಲಾಗುವ ಬೆಳೆಯುವ ಮನಸ್ಸು, ಸಮಸ್ಯೆಗಳಿಗೆ ಪರಿಹಾರ ಚಿಂತಿಸಿ ಕಾರ್ಯತಃ ಯತ್ನಿಸಬಲ್ಲ ಸಂಕಲ್ಪಶಕ್ತಿ ಮತ್ತು ಜೀವನ ಶ್ರದ್ಧೆ ಇವು ಕಲ್ಯಾಣಮ್ಮನವರಿಗೆ ಬಾಳಿನುದ್ದಕ್ಕೂ ಆಸರೆಯಾಯಿತು. ಅವರ ಅನಾರೋಗ್ಯದ ನಡುವೆಯೂ ಅವರನ್ನು ಮುನ್ನಡೆಸಿತು.

"ಶಾರದಾ ಸ್ತ್ರೀ ಸಮಾಜ" ಕಲ್ಯಾಣಮ್ಮನವರ ಮೊದಲ ಸಂಘಟಿತ ಪ್ರಯತ್ನ. 1913ರಲ್ಲಿ ಈ ಸಮಾಜವನ್ನು ಸ್ಥಾಪಿಸುವುದಕ್ಕೆ ಮುಂಚೆಯೇ ಅವರು ಸ್ತ್ರೀ ಸಮಸ್ಯೆಗಳನ್ನು ಕುರಿತು ಗಾಢವಾಗಿ ಆಲೋಚಿಸಿ ಚಿಂತಿಸಿದ್ದರು. ತಮ್ಮ ಚಿಂತನೆ, ಬರಹ, ಉಪನ್ಯಾಸಗಳೆಲ್ಲದರಲ್ಲೂ ಸ್ತ್ರೀ ಶಿಕ್ಷಣದ ಅಗತ್ಯವನ್ನು ಎತ್ತಿಹಿಡಿದ ಕಲ್ಯಾಣಮ್ಮನವರು "ಶಿಕ್ಷಣ"ದ ವ್ಯಾಪ್ತಿಯನ್ನು ಹಿಗ್ಗಿಸಿದರು. ಜಾತಿ, ಮತ, ವರ್ಣಭೇದವೆನ್ನದೆ ಸಮಸ್ತ ಸ್ತ್ರೀಯರೂ, ಬಾಲಕಿಯರೂ ತಮ್ಮ ಜೀವಮಾನದ ಕರ್ತವ್ಯಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಸಾಧ್ಯವಾಗುವಂತೆ ಅವರಿಗೆ ವಿದ್ಯಾಬುದ್ಧಿ ವ್ಯವಹಾರಾದಿಗಳಲ್ಲಿ ಒಳ್ಳೆಯ ಶಿಕ್ಷಣವನ್ನು ಕೊಟ್ಟು

ಅವರು ಸಾಧಾರಣ ವಿದ್ಯಾವಂತರಾಗುವುದರ ಜೊತೆಗೆ ನೇಯ್ಗೆ, ಹೊಲಿಗೆ, ಕಸೂತಿ, ಚಿತ್ರದ ಕೆಲಸ ಮುಂತಾದ ಕೈಗಾರಿಕೆಗಳಲ್ಲಿ ಸುಶಿಕ್ಷಿತರಾಗುವಂತೆ ಇಲ್ಲಿ ಏರ್ಪಾಡು ಮಾಡಲಾಯಿತು.

“ಕನ್ನಡ ನಾಡಿನ ಮಹಿಳೆಯರು ವೀರಮಾತೆಯರಾಗಬೇಕಾದರೆ ಅವರಿಗೆಂದೇ ನಡೆಸಲ್ಪಡುತ್ತಿರುವ ಪತ್ರಿಕೆಗಳು ಹೆಚ್ಚಬೇಕು. ಪತ್ರಿಕೆಗಳು ಯಶಸ್ವಿಯಾಗಿ ನಡೆಯಬೇಕಾದರೆ ಶಿಕ್ಷಿತ ಮತ್ತು ಶ್ರೀಮಂತ ಮಹಿಳೆಯರ ನೆರವು ಅತ್ಯಗತ್ಯವಾಗಿ ಬೇಕಾಗಿದೆ” ಹೀಗೆ ಈ ಧೀರ ಉದ್ದೇಶವನ್ನು ಹೊತ್ತು ಆರಂಭವಾದ “ಸರಸ್ವತಿ” ಪತ್ರಿಕೆ ವ್ಯಕ್ತಿಯೊಬ್ಬಳ ಹವ್ಯಾಸದ ಫಲವಾಗಿ ಮೂಡಿದ ಚಟುವಟಿಕೆಯಾಗಿಯಷ್ಟೇ ಉಳಿಯದೆ ಮಹಿಳೆಯ ಕಲ್ಯಾಣವನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಸಿದ ಚಳುವಳಿಯ ಭಾಗವಾಗಿದೆ. 1920ರಲ್ಲಿ “ಸರಸ್ವತಿ” ಮಾಸ ಪತ್ರಿಕೆಯನ್ನು ಹೊರತಂದರು. ಅಲ್ಲಿಂದ ಮುಂದೆ ಎಷ್ಟೋ ವಿಧವಾದ ಆರ್ಥಿಕ ಮುಗ್ಗಟ್ಟಿನ ನಡುವೆಯೂ ಬಿಡುವಿಲ್ಲದೆ ನಲವತ್ತಮೂರು ವರ್ಷ ನಡೆದ ಮಹಿಳಾ ಮಾಸ ಪತ್ರಿಕೆ ಇದೊಂದೇ ಎನ್ನಬಹುದು. ಸ್ತ್ರೀಯರ ವ್ಯಕ್ತಿತ್ವದ ಅನಂತ ಸಾಧ್ಯತೆಗಳತ್ತ ಓದುಗರನ್ನು ಪ್ರೇರೇಪಿಸಬಲ್ಲ ಉತ್ತಮ ಮಟ್ಟಿನ ಮಾಧ್ಯಮವಾಗಿ “ಸರಸ್ವತಿ” ಕೆಲಸ ಮಾಡಿತು.

ಕಲ್ಯಾಣಮ್ಮನವರು ಬರವಣಿಗೆಯನ್ನು ತಮ್ಮ ಮುಖ್ಯ ಸೃಜನಶೀಲತೆಯ ಅಭಿವ್ಯಕ್ತಿಯಾಗಿ ಪರಿಗಣಿಸಿದರೋ ಇಲ್ಲವೋ, ಆದರೆ ಕನ್ನಡದ ಆರಂಭಕಾಲದ ಬರಹಗಾರ್ತಿಯರಲ್ಲಿ ಅವರ ಹೆಸರು ಉಲ್ಲೇಖಿಸದಿರಲು ಸಾಧ್ಯವೇ ಇಲ್ಲ. ಸೃಜನಶೀಲ ಸಾಹಿತಿಯಾಗಿ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕಲ್ಯಾಣಮ್ಮ ಕೈಯಾಡಿಸಿದ್ದಾರೆ.

ಶ್ರೀಮತಿ ಕಲ್ಯಾಣಮ್ಮನವರ ಹೆಸರನ್ನು ಇಂದಿಗೂ ಅಮರವಾಗಿಸಿರುವ ಅಖಿಲ ಕರ್ನಾಟಕ ಮಕ್ಕಳ ಕೂಟ ಅವರ ದೃಢ ಸಂಕಲ್ಪದ ಕರ್ತೃತ್ವ ಶಕ್ತಿಯ ಬೃಹತ್ ಸಾಧ್ಯತೆಯ ಸಂಕೇತ. ನಾಳಿನ ಭಾವೀ ಪ್ರಜೆಗಳಾಗಬೇಕಾದ ಇಂದಿನ ಮಕ್ಕಳು ರಚನಾತ್ಮಕವಾಗಿ ರೂಪುಗೊಳ್ಳಬೇಕು ಎಂಬುದು ಕಲ್ಯಾಣಮ್ಮನವರ ಅಭಿಪ್ರಾಯವಾಗಿತ್ತು. ತಮಗೆ ಸ್ವಂತ ಮಕ್ಕಳಿಲ್ಲದಿದ್ದರೂ, ನೆರೆಹೊರೆಯ, ನಾಡಿನ ಮಕ್ಕಳನ್ನೆಲ್ಲಾ ತನ್ನದೆಂದುಕೊಂಡ ಮಹಾಮಾತೆ ಆಕೆ. ಆ ಅಖಂಡ ಮಾತೃತ್ವದ ಮಾತೃರೂಪವೇ ಮಕ್ಕಳ ಕೂಟವಾಗಿ ಹುಟ್ಟಿ ಹಲವಾರು ರೂಪದಲ್ಲಿ ಬೆಳೆದು ನಾಡಿನ ಎಳೆಯ ಪ್ರತಿಭೆಗಳನ್ನೆಲ್ಲಾ ತನ್ನೆಡೆಗೆ ಆಕರ್ಷಿಸಿಕೊಂಡಿತು.

ಕಲ್ಯಾಣಮ್ಮನವರು ಸ್ತ್ರೀಯರ ಮತ್ತು ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಮುಖ್ಯವಾಗಿ ಸಂಘಗಳನ್ನು ಕಟ್ಟಿ ಶ್ರಮಿಸಿದರು. ಇವರ ಈ ಸೇವಾ ಮನೋಭಾವಕ್ಕೆ ದೊರೆತ ಪುರಸ್ಕಾರ, ಹಲವಾರು ಸಂಘ ಸಂಸ್ಥೆಗಳ ಸದಸ್ಯರಾಗಲು ಅವರಿಗೆ ಆಹ್ವಾನ. ಈ ರೀತಿ ಸಿಕ್ಕ ಪ್ರತಿಯೊಂದು ಅವಕಾಶವನ್ನು ಕಲ್ಯಾಣಮ್ಮನವರು ಸಮರ್ಥವಾಗಿ ಬಳಸಿಕೊಂಡು ಸ್ತ್ರೀಯರಿಗೆ ಅವಕಾಶಗಳು ದೊರೆತರೆ ಏನನ್ನಾದರೂ ಸಾಧಿಸಬಲ್ಲರು ಎಂಬುದಕ್ಕೆ ನಿದರ್ಶನವಾದರು. ಉತ್ತಮ ಸ್ತ್ರೀ ಪ್ರತಿನಿಧಿಯಾದರು. ಪುರಸಭೆಯ ಸದಸ್ಯೆಯಾಗಿ 1937ರಲ್ಲಿ ಚುನಾಯಿತರಾದದ್ದಲ್ಲದೆ ನಂತರ ಉಪಾಧ್ಯಕ್ಷೆಯಾಗಿ ಚುನಾಯಿತರಾದರು. ಆ ಸ್ಥಾನಗಳಿಗೆ ಗೌರವ ಬರುವಂತೆ ಕಾರ್ಯ ನಿರ್ವಹಿಸಿದರು. 1932ರಲ್ಲಿ ಪಠ್ಯ ಪುಸ್ತಕ ಸಮಿತಿಯ ಸದಸ್ಯೆಯಾಗಿ ಶಿಕ್ಷಣ ಕ್ಷೇತ್ರಕ್ಕೆ 1939ರಲ್ಲಿ ಗೌರವ ನ್ಯಾಯಾಧೀಶ ಹುದ್ದೆಗೆ ಆಯ್ಕೆಯಾಗಿ ಹದಿನೈದು ವರ್ಷಗಳ ಸೇವೆ ಸಲ್ಲಿಸಿದರು.

ಸಾರ್ವಜನಿಕ ಕ್ಷೇತ್ರಗಳಲ್ಲಿ ಕಲ್ಯಾಣಮ್ಮನವರ ಸೇವೆಯನ್ನು ಗುರುತಿಸಿದ ಮೈಸೂರು ಸರ್ಕಾರ 1935ರಲ್ಲಿ ಅವರಿಗೆ “ಸಾರ್ವಜನಿಕ ಸೇವಾ ಪದಕ” ಕೊಟ್ಟು ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿಗಳ ಸಭೆಯ ಗೌರವ ಸದಸ್ಯತ್ವವನ್ನು ನೀಡಿ ಸನ್ಮಾನಿಸಿತ್ತು. ಬಂಗಾಳದ ಆರ್ಯ ಸಭಾ ಪರಿಷತ್ತು “ವಿದ್ಯಾವಿನೋದಿನಿ” ಎಂಬ ಬಿರುದಿತ್ತು ಅವರನ್ನು ಗೌರವಿಸಿತ್ತು.

ಬದುಕು ಏನೆಂದರೇನೇ ಅರ್ಥವಾಗುವ ಮುನ್ನ ವೈಧವ್ಯದ ಬಿಸಿ ತಾಗಿಸಿಕೊಂಡರೂ ಆ ವೈಧವ್ಯದ ನೀರಸ ಕ್ರೂರ ಆಚರಣೆಗಳಲ್ಲಿ ಮುರುಟಿ ಹೋಗದೆ ತಾವು ಹಿಡಿದ ಗುರಿಯನ್ನು ಮುಟ್ಟಲು ಬೇಕಾದ ಸಂಕಲ್ಪ ಶಕ್ತಿಯ ಬಲದಿಂದ ತನ್ನ ಸುತ್ತಲಿನ ಜನರನ್ನು ತಮ್ಮ ವಿಚಾರಗಳತ್ತ ಸೆಳೆದು, ಪ್ರಭಾವಿಸಿದ ಆಯಸ್ಕಾಂತ ಶಕ್ತಿ ಕಲ್ಯಾಣಮ್ಮ! ಈ ಸಾರ್ಥಕ ಜೀವಿಯು ಗತಿಸಿ ಇಂದಿಗೆ ನೂರು ವರ್ಷಗಳು ಸಂದಿವೆ. ಅವರ ನೆನಪಿಗೆ “ಅಚಲ” ಅರ್ಪಿಸುತ್ತಿರುವ ಸ್ಮರಣೆಯ ಪುಷ್ಪಗಳು ಇಲ್ಲಿ ಕೆಲವಿವೆ.

— ಎನ್. ಗಾಯತ್ರಿ

# ಹೆಣ್ಣಿನ ಕಣ್ಣೀರಿಗೆ

## ಅಭಿವ್ಯಕ್ತಿ : ಸಿರಿಜಾತ್ರೆ

ಆಕಾಶದ ಅಂಗಳದಲ್ಲಿ ಚಂದ್ರ ತನ್ನ ಯಾತ್ರೆ ಆರಂಭಿಸಿದರೆ ಸಾಕು ಹಿರಿಯಡ್ಕದ ಹೆಂಗಳೆಯರ ನಿಟ್ಟುಸಿರುಗಳು ಹೊ ರ ಬ ರ ಲು ಆರಂಭವಾಗುತ್ತದೆ. ಕಿಡಿ ಕಾರುವ ಕಣ್ಣುಗಳು, ಅದುರುವ ಮೈ ತನ್ನೊಳಗೆ ಇಷ್ಟು ದಿನಗಳ ಕಾಲ ಅಡಗಿದ್ದ ನೋವುಗಳನ್ನು ಹೊರಚೆಲ್ಲಲು ಆರಂಭಿಸುತ್ತವೆ. ಪೂರ್ಣಿಮೆಗೂ ಹೆಂಗಳೆಯರಿಗೂ ಇಲ್ಲಿ ಇನ್ನಿಲ್ಲದ ನಂಟು ತುಳು ಪಂಚಾಂಗದ ಮೊದಲ ಹುಣ್ಣಿಮೆ ಹೆಣ್ಣಿಗೆ ನಿಟ್ಟುಸಿರು ಹೊರ ಹಾಕಿ ಹೊಸ ಉ ಸಿ ರು ನೀಡುವ ದಿನವೂ ಆಗುತ್ತದೆ.

**❋ ಜಿ. ಎನ್. ಮೋಹನ್**

ದಕ್ಷಿಣ ಕನ್ನಡ ಜಿಲ್ಲೆಯ ಪುಟ್ಟ ಊರಾದ ಹಿರಿಯಡ್ಕ ಇಡೀ ವಿಶ್ವದ ಗಮನ ಸೆಳೆವ ಭಾಗವಾಗಿದೆ ಎನ್ನಬಹುದು ಏಪ್ರಿಲ್-ಮೇ ತಿಂಗಳಲ್ಲಿ ಇಲ್ಲಿ ಹು ಣ್ಣಿ ಮೆ ಆರಂಭವಾದರೆ ಚಂದ್ರನ ಬೆಳದಿಂಗಳ ಬೆಳಕಲ್ಲಿ ಹಲವು ಕತ್ತಲೆಯ ಯಾತನೆಯ ಲೋಕಗಳು ಬಿಚ್ಚಿಕೊಳ್ಳುತ್ತವೆ. ಜೀವನದ ಕತ್ತಲೆಗೆ ಚಂದ್ರನ ಟಾರ್ಚ್‌ಲೈಟ್.

ಕೈಯಲ್ಲಿ ಹೊಂಬಾಳೆ ಹಿಡಿದ ಹೆಂಗಳೆಯರು ಹಿರಿಯಡ್ಕಕ್ಕೆ ಮೂರು ದೂರ ಇರುವಾಗಲೇ ಮೈಗೆ ಆವೇಶ ತುಂಬಿಕೊಳ್ಳುತ್ತಾರೆ. ದೂ ರ ದ ರಸ್ತೆಯಿಂದಲೇ ತಲೆ ಹೊರಳಿಸುತ್ತಾ ನೇರವಾಗಿ ಹಿರಿಯಡ್ಕ ದೇವಸ್ಥಾನದ ಅಂಗಳಕ್ಕೆ ಸೇರುತ್ತಾರೆ. ಹೆಂಗಳೆಯರೆಲ್ಲರೂ ಕಲ್ಯಾಣಿಯಲ್ಲಿ ಮಿಂದು ಗುಂಪು ಗುಂಪಾಗಿ ದೇವಸ್ಥಾನದ ಅಂಗಳದಲ್ಲಿ ನಿಲ್ಲುತ್ತಾರೆ. ಸೂರ್ಯ ಕ್ರಮೇಣ ಮರೆಯಾಗಿ ಚಂದ್ರ ಕಾಣಿಸಿಕೊಳ್ಳುತ್ತಿದ್ದಂತೆಯೇ ಉತ್ಸವ ಹೊಸ ಮೆರುಗು ಪಡೆಯಲು ಆರಂಭಿಸುತ್ತದೆ.

ಕಿತ್ತಳೆ ಬಣ್ಣದ ಸೀರೆ ಉಟ್ಟ ಹೆಂಗಳೆಯರು ನಿಂತ ಸ್ಥಳದಲ್ಲಿಯೇ ಕುಣಿಯಲು ಆರಂಭಿಸುತ್ತಾರೆ. ಕೈಯಲ್ಲಿರುವ ಹೊಂಬಾಳೆಯನ್ನು ಪದೇ ಪದೇ ಹಣೆಗೆ ಬಡಿದುಕೊಳ್ಳುತ್ತಾ ನೋವು ವ್ಯಕ್ತಪಡಿಸುತ್ತಾರೆ, ಹೊಂಬಾಳೆಯ ಮೊಗ್ಗುಗಳು ಇವರ ಸುತ್ತ ಬಿದ್ದು ಆವರಣಕ್ಕೆ ಹೊಸ ರೂಪು ನೀಡುತ್ತದೆ.

ಕಿತ್ತಳೆ ಸೀರೆ ಉಟ್ಟ ಹಿರಿಯ ಹೆಂಗಸರೊಂದಿಗೆ ಆದೀಗ ತಾನೆ ಪ್ರಥಮ ಬಾರಿ ಕಾಲಿಟ್ಟ ಹದಿಹರೆಯದ ಹುಡುಗಿಯರು ಜೊತೆಗೆ ಪ್ರತಿ ಗುಂಪಿನಲ್ಲೊಬ್ಬ ಗಂಡು ಇಂತಹ ಹಲವಾರು ಗುಂಪುಗಳ ಕುಣಿತವೇ "ಸಿರಿ ಜಾತ್ರೆ" ಯ ವೈಶಿಷ್ಟ್ಯ.

ಸಿರಿ ಜಾತ್ರೆ ಎಲ್ಲ ರೀ ತಿ ಯ ಜಾತ್ರೆಗಳಂತಲ್ಲ. ಹೆಣ್ಣಿನ ನೋವಿಗೆ ಅಭಿವ್ಯಕ್ತಿ ನೀಡುವ ಜಾತ್ರೆ ಶತಮಾನಗಳಿಂದಲೂ ಪುರುಷ ಪ್ರ ಧಾ ನ ಸಮಾಜದಲ್ಲಿ ನೋವು ಕಣ್ಣೀರುಗಳೊಂದಿಗೇ ಬೆಳೆದು ಬಂದ ಹೆಣ್ಣಿಗೆ ತನ್ನ ದುಃಖ ದುಮ್ಮಾನಗಳನ್ನು ಇತರರೊಬ್ಬರೊಂದಿಗೆ ಹಂಚಿಕೊಳ್ಳುವ ಅವಕಾಶವನ್ನೂ ಈ ಸ ಮಾ ಜ ನೀಡಿಲ್ಲ. ಅಂದಿನಿಂದ ಇಂದಿನವರೆಗೂ ಈ ಮಾತು ನಿಜವಾಗುತ್ತಲೇ ಬಂದಿವೆ. ಇಂತಹ ಸಂದರ್ಭದಲ್ಲಿ "ಸಿರಿ ಜಾತ್ರೆ" ಹೆಣ್ಣಿನ ನೋವನ್ನು ಇತರರೊಂದಿಗೆ ಹಂಚಿಕೊಳ್ಳಲು ಒಂದು ಪ್ರಮುಖ ರಹದಾರಿಯಾಗಿದೆ.

(ಪುಟ 31ರಲ್ಲಿ ಮುಂದುವರೆದಿದೆ)

# ಸ್ತ್ರೀ ಸುಧಾರಣೆ ಮತ್ತು ಸಂಘಟನೆ

ಕಲ್ಯಾಣಮ್ಮನವರು ನಮ್ಮ ಕಾಲಕ್ಕೆ ಪ್ರಸ್ತುತವೆನಿಸುವುದು ಅವರು ಬದುಕನ್ನು ಹೇಗೆ ಎದುರಿಸಿದರು ಇಲ್ಲವೇ ಹೇಗೆ ಸ್ವೀಕರಿಸಿದರು ಎಂಬುದರಲ್ಲಿ ಬಾಲ್ಯದಲ್ಲೇ ವೈಧವ್ಯ ಎದುರಾದರೂ, ಸಂಪ್ರದಾಯಸ್ಥ ಕೌಟುಂಬಿಕ, ಸಾಮಾಜಿಕ ಸನ್ನಿವೇಶಗಳು ಹಿಂದಕ್ಕೇ ಎಳೆಯುತ್ತಿದ್ದರೂ ಅವುಗಳಿಂದ ಕುಗ್ಗಿ, ಪ್ರವಾಹ ಪತಿತರಾಗಿ ಅವರು ಬದುಕನ್ನು ಮುಗಿಸಲಿಲ್ಲ. ಬದಲಾಗಿ ಈ ಸನ್ನಿವೇಶಗಳನ್ನು ಎದುರಿಸುತ್ತಲೇ ತಮ್ಮ ಬದುಕನ್ನು ಸಾಮಾಜಿಕವಾಗಿ ವಿಶಾಲ ಆಯಾಮ ಪಡೆಯುವಂತೆ ಬೆಳೆಸಿಕೊಂಡರು ಎನ್ನುವುದರಿಂದ ಅವರ ವ್ಯಕ್ತಿತ್ವ ನಮಗೆ ಮುಖ್ಯವಾಗುತ್ತದೆ. ಅವರ ಕೌಟುಂಬಿಕ ಹಿನ್ನೆಲೆಯೋ, ಮನೆತನದ ಹೆಗ್ಗಳಿಕೆಯೋ ಇದಕ್ಕೆ ಕಾರಣವಲ್ಲ. ಪ್ರಗತಿ ಪರವಾದ ವಿಚಾರಗಳತ್ತ ತೆರೆದುಕೊಳ್ಳಬಲ್ಲ ಬದಲಾಗುವ ಬೆಳೆಯುವ ಮನಸ್ಸು, ಸಮಸ್ಯೆಗಳಿಗೆ ಪರಿಹಾರ ಚಿಂತಿಸಿ ಕಾರ್ಯತಃ ಯತ್ನಿಸಬಲ್ಲ ಸಂಕಲ್ಪಶಕ್ತಿ, ಮತ್ತು ಜೀವನ ಶ್ರದ್ಧೆ ಅವರನ್ನು ಹೇಗೆ ಮುನ್ನಡೆಸಿದವು ಎಂಬುದು ಹೆಚ್ಚು ಪ್ರಸ್ತುತವೆನಿಸುತ್ತದೆ.

ತಮ್ಮ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ೧೯೧೩ರಲ್ಲಿ ಅವರು "ಶಾರದಾ ಸ್ತ್ರೀ ಸಮಾಜ"ವನ್ನು ಸ್ಥಾಪಿಸಿದರು. ಈ ಸಮಾಜವನ್ನು ಕಟ್ಟುವ ಎಷ್ಟೋ ಮೊದಲಿನಿಂದಲೂ ಸ್ತ್ರೀಯರ ಸಮಸ್ಯೆಗಳನ್ನು ಕುರಿತು ಅವರು ಚಿಂತಿಸಿದ್ದರು. ಬಾಲ್ಯ ವಿವಾಹ, ವೈಧವ್ಯ, ಅಜ್ಞಾನ, ಬಡತನ, ನಿರಕ್ಷರತೆ. ಆರ್ಥಿಕ ಪರಾವಲಂಬನೆಗಳು ಸ್ತ್ರೀಯರ ಬದುಕನ್ನು ದುರಂತಗಳಿಗೆ ತಳ್ಳುವ ಅಂಶಗಳೆಂದು ಗುರುತಿಸಿ, ಇದರ ನಿವಾರಣೆಗೆ ಸ್ತ್ರೀಯರ ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆಗೆ ನೆರವಾಗುವಂಥ ಸಮಾಜವನ್ನು ಅವರು ಕಟ್ಟಿದರು.

ಈ ರೀತಿ ಸ್ತ್ರೀಯರ ಶೈಕ್ಷಣಿಕ ಪ್ರಗತಿ, ಆರ್ಥಿಕ ಪ್ರಗತಿಯನ್ನು ಸಾಧಿಸುವ ಅವರ ಯತ್ನ ದೇಶದಾದ್ಯಂತ ಆ ಕಾಲದಲ್ಲಿ ಕಂಡುಬರುತ್ತಿದ್ದ ಅದೇ ಬಗೆಯ ಯತ್ನಗಳ ಒಂದು ಭಾಗವಾಗಿದೆ. ಆದರೆ ಭಾರತದ ಇತರ ಕೆಲವು ಪ್ರಾಂತಗಳಂತೆ ವಸಾಹತುಶಾಹಿ ಪ್ರಭಾವಗಳಿಗೆ ಪೂರ್ಣವಾಗಿ ತೆರೆದುಕೊಂಡಿರದ ಕರ್ನಾಟಕದಲ್ಲಿ ಸ್ತ್ರೀ ಶಿಕ್ಷಣದ ಅವಶ್ಯಕತೆಯನ್ನು ಜನರಿಗೆ ಮನದಟ್ಟು ಮಾಡಿಕೊಡುವ ಯತ್ನ ಬೇರಿನ ನೆಲೆಯಿಂದಲೂ ಆಗಬೇಕಾಗಿತ್ತು. ಆದ್ದರಿಂದ ತಮ್ಮ ಚಿಂತನೆ, ಬರಹ, ಉಪನ್ಯಾಸಗಳೆಲ್ಲದರಲ್ಲೂ ಕಲ್ಯಾಣಮ್ಮ ಸ್ತ್ರೀ ಶಿಕ್ಷಣದ ಅಗತ್ಯವನ್ನು ಎತ್ತಿ ಹಿಡಿಯಲು ತೀವ್ರವಾಗಿ ಯತ್ನಿಸಿದ್ದಾರೆ.

ಚಿಕ್ಕ ವಯಸ್ಸಿನಲ್ಲೇ ಮದುವೆ ಮಾಡುವುದರಿಂದ, ಸ್ತ್ರೀಯರಿಗೆ ಶಿಕ್ಷಣಾವಕಾಶ ದೊರೆಯುತ್ತಿಲ್ಲ. ತಂದೆ ತಾಯಿಗಳು ಸಾಧ್ಯವಾದಷ್ಟೂ ವಿಧವಾದ ಶಿಕ್ಷಣವನ್ನು ಬಾಲ್ಯದಲ್ಲೇ ತಮ್ಮ ಹೆಣ್ಣು ಮಕ್ಕಳಿಗೆ ಒದಗಿಸಬೇಕು ಎಂದು ಅವರು ಒತ್ತಾಯಿಸುವುದರ ಜೊತೆಗೆ ಸ್ತ್ರೀಯನ್ನು ಕೀಳಾಗಿ ಪರಿಗಣಿಸುವ ತಾರತಮ್ಯ ಧೋರಣೆಯನ್ನು ಬಲವಾಗಿ ಖಂಡಿಸುತ್ತಾರೆ. ಸ್ತ್ರೀಯರ ಸಾಮಾಜಿಕ ಹೊಣೆಯನ್ನು ಗುರುತಿಸುವ ಈ ಮಾತುಗಳು ಗಮನಾರ್ಹ: "ಸ್ತ್ರೀಯು ವಿವೇಕ ರಹಿತಳಾಗಿ ಪುರುಷನ ಅಧೀನದಲ್ಲಿ ಬಿದ್ದಿದ್ದು ಅವನ ಮನೋವಿನೋದಪಡಿಸಿ ಅವನಿಗೆ ಒಂದು ಆಭರಣದಂತಿರಬೇಕೆಂದು ಅವಳು ಸೃಷ್ಟಿಸಲ್ಪಡಲಿಲ್ಲ. ತನಗೂ ಮತ್ತು ಇತರರಿಗೂ ಸೌಖ್ಯವನ್ನು ಉಂಟುಮಾಡುವುದಕ್ಕೂ ಅನೇಕ ಉತ್ತರವಾದಿ ಕಾರ್ಯಗಳನ್ನು ವಿರಚಿಸಿ ಇತರರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಅವರನ್ನು ಶಿಕ್ಷಿಸಿ ದಯಾರ್ದ್ರ ಮಾನವರಾಗುವಂತೆ ಮಾಡುವುದಕ್ಕಾಗಿಯೇ ಸ್ತ್ರೀಯು ಸೃಷ್ಟಿಸಲ್ಪಟ್ಟಿದ್ದಾಳೆ. ಹಾಗಲ್ಲದೆ ತಾನು ಮಾತ್ರ ಮನೋವಿನೋದಕ್ಕಾಗಿಯೇ ಒಡವೆ ವಸ್ತ್ರಗಳಿಂದ ಶೃಂಗರಿಸಿಕೊಂಡು ಹೊಟ್ಟೆಯನ್ನು ತುಂಬಿಸಿಕೊಂಡು ಕಾಲ ಕಳೆಯುತ್ತಿರಬೇಕೆಂಬ ಉದ್ದೇಶಕ್ಕಾಗಿರುವುದಿಲ್ಲ" (ಸ್ತ್ರೀಶಿಕ್ಷಣ ಕ್ರಮ)

ಸ್ತ್ರೀಯರು ಪುರುಷರ ಅಧೀನರು ಎಂಬ ಪರಂಪರಾಗತ ನಂಬಿಕೆಗೆ ವಿರುದ್ಧವಾಗಿ ಕಲ್ಯಾಣಮ್ಮ ಸ್ತ್ರೀಯರ ಸ್ವತಂತ್ರ ಅಸ್ತಿತ್ವವನ್ನೂ ಅವರದೇ ಆದ ಬದುಕಿನ ಅರ್ಥಪೂರ್ಣತೆಯನ್ನೂ ಖಚಿತ ಶಬ್ದಗಳಲ್ಲಿ ಹೇಳಿರುವುದನ್ನು ಗಮನಿಸಬೇಕು. ಸ್ತ್ರೀಯರು ಇಂದು ನಿಷ್ಪ್ರಯೋಜಕರು, ಅಬಲೆಯರು ಎನಿಸಿರುವುದರ ಐತಿಹಾಸಿಕಬೆಳವಣಿಗೆಯನ್ನು ಕಲ್ಯಾಣಮ್ಮ ಆ ಕಾಲದಲ್ಲಿ ಪ್ರಬಲವಾಗಿ ವ್ಯಾಪಿಸಿದ್ದ ರಾಷ್ಟ್ರೀಯತಾವಾದಿ ಚಿಂತನೆಯ ಒಂದು ವಿಚಾರಧಾರೆಯ ಮೂಲಕ ಗುರುತಿಸುತ್ತಾರೆ. ಆ ವಿಚಾರಧಾರೆ "ಆರ್ಯ ಸಂಸ್ಕೃತಿ, ಆರ್ಯ ಮಹಿಳೆ"ಯ ಪರಿಕಲ್ಪನೆಯನ್ನು ಒಳಗೊಂಡಿರುವಂಥಾದ್ದು. ಪ್ರಾಚೀನಕಾಲದಲ್ಲಿ ಭಾರತೀಯ ಮಹಿಳೆಯರು ತಮ್ಮ ಪತಿಯಂದಿರು, ಕುಟುಂಬಗಳ ಶ್ರೇಯಸ್ಸಿಗಾಗಿ ದುಡಿದಿದ್ದೇ ಅಲ್ಲದೇ ಪತಿಯ ವಿಯೋಗ ಅಥವಾ ಮತ್ತಿತರ ಕೇಡುಗಳು ಎದುರಾದಾಗ ಬಹು ಕೆಚ್ಚೆದೆಯಿಂದ ಅವುಗಳನ್ನು ಎದುರಿಸಬಲ್ಲವರಾಗಿದ್ದರು. ತಮಗೂ ಸುತ್ತಲಿನ ಸಮಾಜದ ಕಷ್ಟಕ್ಕೊಳಗಾದ ಜನರಿಗೂ ಉಪಕಾರಕವಾಗಿ ಬದುಕಬಲ್ಲ ಶಕ್ತಿ ಅವರಿಗಿತ್ತು. ಆದರೆ ಆಧುನಿಕ ಕಾಲದಲ್ಲಿ ಹೆಂಗಸರು ದಾಸ್ಯವೃತ್ತಿ, ಅಂಧಾನುಕರಣೆ, ಸುಖಲೋಲುಪತೆಗಳಲ್ಲಿ ಮುಳುಗಿರುವುದರಿಂದ ತಮ್ಮ ಹಿಂದಿನವರಿಗಿದ್ದ ಸ್ವತಂತ್ರ ಕ್ರಿಯಾಶೀಲತೆ ಇವರಿಗಿಲ್ಲವಾಗಿದೆ. ಇವರು ಯಾವುದಕ್ಕೂ ಪ್ರಯೋಜನವಿಲ್ಲದ ಅಬಲಾತನಕ್ಕೆ ತಳ್ಳಲ್ಪಟ್ಟಿದ್ದಾರೆ. ಇದರಿಂದ ಬಿಡುಗಡೆ ಹೊಂದಲು ನಿಜವಾದ ತಮ್ಮ ಶಕ್ತಿ ಸಾಮರ್ಥ್ಯ ಅರಿವು ಬೆಳೆಸುವಂಥ ಶಿಕ್ಷಣ ಅವರಿಗೆ ಅವಶ್ಯಕ. ಸುಶಿಕ್ಷಿತರಾದ ತರುಣಿಯರಲ್ಲಿ ಸಾಮಾಜಿಕ ಕಳಕಳಿ, ಸೇವಾಭಾವ, ಸುಧಾರಣಾ ಪರತೆಗಳು ಬೆಳೆಯುವುದು ಸುಲಭ ಎಂದು ಅವರು ಗುರುತಿಸುತ್ತಾರೆ. "ಸ್ತ್ರೀಯರು ಯಾತರಲ್ಲಿ ಅಬಲೆಯರು ?" "ಸ್ತ್ರೀಯರ ಕರ್ತವ್ಯ" "ಸ್ತ್ರೀಯರೂ ಸಮಾಜ ಸೇವೆಯೂ" "ಆಲಸ್ಯವೂ ವಿಲಾಸಿಕೆಯೂ" "ಗೃಹಿಣಿಯೂ ಗೋರಕ್ಷಣೆಯೂ" ಹಿಂದೂ ಸ್ತ್ರೀಯರು ಮನೆಯಲ್ಲಿ ಮಾಡಬಹುದಾದ ಕುಶಲ ಕೈಗಾರಿಕೆಗಳು" "ಇಂದಿನ ಚೈನಾ ಮಹಿಳೆಯರು" "ಹಿಂದೂ ಸ್ತ್ರೀಯರ ಆದರ್ಶಗಳು" ಮುಂತಾದ ಅನೇಕ ಲೇಖನಗಳು ಕಲ್ಯಾಣಮ್ಮನವರ ಸ್ತ್ರೀಪರ ಚಿಂತನೆಗಳನ್ನು ದಾಖಲಿಸುತ್ತವೆ.

ಸ್ತ್ರೀಯರ ಅವನತಿಗೆ ಅವರು ನೀಡುವ ಕಾರಣಗಳು ಮತ್ತು ಸ್ತ್ರೀ ಸುಧಾರಣೆಯ ಬಗ್ಗೆ ಅವರ ವಿಚಾರಗಳು ಹೇಗೆ ಇದ್ದರೂ ಕಾರ್ಯರೂಪದಲ್ಲಿ ಅವರು ಸ್ತ್ರೀಯರ ಸಮಸ್ಯೆ ನಿವಾರಣೆಗೆ ಸಂಘಟಿತ ಯತ್ನ ಅಗತ್ಯವೆಂಬುದನ್ನು ಪ್ರತಿಪಾದಿಸಿದ್ದರೆನ್ನುವುದು ಬಹು ಮುಖ್ಯ ಸಂಗತಿ. ಮಹಿಳಾ ಸಮಾಜಗಳ ಸ್ವರೂಪ, ಕಾರ್ಯವಿಧಾನ, ಅವುಗಳ ಗುರಿಯನ್ನು ಕುರಿತಂತೆ ಕಲ್ಯಾಣಮ್ಮನವರು ಅತ್ಯಂತ ಸ್ಪಷ್ಟವಾಗಿ ಪ್ರತಿಪಾದಿಸಿರುವ ಹಲವು ವಿಚಾರಗಳು ಇಂದಿಗೂ ಮನನೀಯವಾಗಿವೆ. ಮಹಿಳಾ ಸಮಾಜಗಳಲ್ಲಿ ಸಮಾಜದ ಶ್ರೀಮಂತ, ಮಧ್ಯಮ ಮತ್ತು ಬಡ ವರ್ಗಗಳ ಮಹಿಳೆಯರು ಸದಸ್ಯೆಯರಾಗಿರಬೇಕು. ಈ ಮೂರೂ ವರ್ಗಗಳ ಮಹಿಳೆಯರಿಗೂ ಉಪಯುಕ್ತವಾಗುವ ರೀತಿಯಲ್ಲಿ ಸಂಘಗಳ ಕಾರ್ಯಕ್ರಮ ರೂಪಿಸಲ್ಪಡಬೇಕು. ಉಪನ್ಯಾಸಗಳು, ವಾಕ್ಚಿತ್ರ ಪ್ರದರ್ಶನಗಳು ಮುಂತಾದ ಕಾರ್ಯಕ್ರಮಗಳಿರಲಿ, ಕಸೂತಿ, ಹೊಲಿಗೆ, ಬೆತ್ತದ ಹೆಣಿಗೆಗಳಂಥ ಕೈಗಾರಿಕೆಗಳ ಕಲಿಕೆಯಿರಲಿ, ಎಲ್ಲ ವರ್ಗದ ಮಹಿಳೆಯರೂ ಕಲೆತು ಕಲಿಯುವ ಮೂಲಕ ಭೇದಭಾವ ನಿವಾರಿಸಿಕೊಳ್ಳಲು ಅವಕಾಶವಿರಬೇಕು ಎಂಬುದನ್ನು ಅವರು ಮುಖ್ಯವಾಗಿ ಪರಿಗಣಿಸುತ್ತಾರೆ. ಶಿಕ್ಷಣಾವಕಾಶ ಮತ್ತು ಆರ್ಥಿಕ ಬಲವಿರುವ ಶ್ರೀಮಂತ ಮಹಿಳೆಯರು ಸಮಾಜದ ಈ ಕಾರ್ಯಕ್ರಮಗಳನ್ನು ಏರ್ಪಡಿಸಿ ನಡೆಸುವ ಜವಾಬ್ದಾರಿ ವಹಿಸಬೇಕು. ಅಷ್ಟು ಆರ್ಥಿಕ ಬಲವಿಲ್ಲದ ಮಧ್ಯಮ ಮತ್ತು ಬಡವರ್ಗದ ಮಹಿಳೆಯರಿಗೆ ಶೈಕ್ಷಣಿಕ ಹಾಗೂ ವೃತ್ತಿ ತರಬೇತಿಯ ಅವಕಾಶಗಳನ್ನು ಕಲ್ಪಿಸಿ ಕೊಡುವುದು ಇಂಥ ಸಮಾಜಗಳ ಧ್ಯೇಯವಾಗಬೇಕು. ಈ ಸಮಾಜಗಳು ಸ್ವಯಂಸೇವಕಿಯರನ್ನು ನೇಮಿಸಿ, ಹಳ್ಳಿಗಳಲ್ಲಿನ ಅಶಿಕ್ಷಿತರು, ಬಡವರ ಜನಗಣತಿ ಮಾಡಿ, ಅವರಲ್ಲಿ ಆರೋಗ್ಯ, ನೈರ್ಮಲ್ಯ, ಶಿಕ್ಷಣದ ಅವಕಾಶ, ಅವಶ್ಯಕತೆಗಳನ್ನು ಪ್ರಸಾರ ಮಾಡಲು ಸಹಾಯ ಮಾಡಬೇಕು. ತೀರಾ ಬಡತನದಲ್ಲಿ ನರಳುತ್ತಿರುವವರನ್ನು ಎಲ್ಲ ಸಾಧ್ಯವಾದ ನೆರವು ನೀಡಿ ಆರ್ಥಿಕ ಸ್ವಾವಲಂಬನೆಯ ಕಡೆಗೆ ಮೇಲೆತ್ತಲು ಯತ್ನಿಸಬೇಕು. ಮಹಿಳಾ ಸಮಾಜಗಳಿಗೆ ಇಂಥವರು ಸದಸ್ಯೆಯರಾಗಿ ಬಂದು ಶಿಕ್ಷಣದಿಂದ ಜಾಗೃತರಾಗಿ, ವೃತ್ತಿ ತರಬೇತಿಯಿಂದ ಸ್ವಾವಲಂಬನೆ ಗಳಿಸಿ, ಆತ್ಮ ವಿಶ್ವಾಸ ತಳೆದು ನಮ್ಮಂಥ ಇತರ ಸ್ತ್ರೀಯರನ್ನು ಉದ್ಧರಿಸಲು ಮುಂದಾಗುವಂತೆ ಆಗಬೇಕು. ಹೀಗೆ ಸಮಾಜಗಳನ್ನು ಕಟ್ಟಿ, ಸ್ತ್ರೀಯರನ್ನು ಸುಧಾರಿಸುವ

ಯತ್ನದಲ್ಲಿ ಎಲ್ಲ ಸ್ತ್ರೀಯರು ತೊಡಗುವ ಕ್ರಿಯೆ ನಿರಂತರ ಸರಪಳಿ ಕ್ರಿಯೆಯಾಗಿ ಮುಂದುವರೆಯಬೇಕು ಎಂಬುದು ಕಲ್ಯಾಣಮ್ಮ ಕಂಡ ಸ್ತ್ರೀ ಸುಧಾರಣೆಯ ಕನಸಾಗಿತ್ತು.

ತಾವು ಬಯಸಿದಂತೆ ಸ್ತ್ರೀಯರಿಗೆ ಮೂಲ ಶಿಕ್ಷಣ, ವೃತ್ತಿ ಶಿಕ್ಷಣಗಳನ್ನು ಕಲ್ಪಿಸಲು ಶಾರದಾ ಸ್ತ್ರೀ ಸಮಾಜಕ್ಕೆ ಸ್ವಂತ ಕಟ್ಟಡದ ಅಗತ್ಯವಿದ್ದುದನ್ನು ಮನಗಂಡು, ಅಂಥ ಕಟ್ಟಡವನ್ನು ಕಲ್ಪಿಸಿ, ನಿರ್ಮಿಸಲು ಅವರು ಹಗಲಿರುಳು ದುಡಿದರು. ಸಮಾಜವು ಕಟ್ಟಡ ಪಡೆದು ಪ್ರಾಥಮಿಕ, ಮಾಧ್ಯಮಿಕ ನಂತರ ಪ್ರೌಢ ಶಿಕ್ಷಣಕ್ಕೂ ಸಮರ್ಥವಾಗಿ ಬೆಳೆಯಿತು. ಆದರೆ ಸಮಾಜದ ಅತ್ಯಂತ ಕೆಳವರ್ಗದ ಮಹಿಳೆಯರ ಸಮಸ್ಯೆಗಳ ಸುಧಾರಣೆ ಸಾಧ್ಯವಾಗಬೇಕೆಂಬ ಕಲ್ಯಾಣಮ್ಮನವರ ಕನಸು ಇಂದಿಗೂ ಪೂರ್ಣ ನನಸಾಗಿಲ್ಲ ಎನ್ನುವುದು ನಿಜವಾದರೂ ಕಲ್ಯಾಣಮ್ಮನವರ ವ್ಯಕ್ತಿತ್ವ ವಿಚಾರಗಳಿಂದ ಪ್ರಭಾವಿತರಾಗಿ, ಅವರದೇ ಮಾರ್ಗ ದರ್ಶನದಿಂದ ತಮ್ಮ ಬೆಳವಣಿಗೆಯನ್ನು ಪಡೆದುಕೊಂಡ ಮಹಿಳೆಯರು ಅನೇಕರು ಮುಂದೆ ಸ್ವತಂತ್ರವಾಗಿ ಸ್ತ್ರೀ ಸುಧಾರಣೆಗೆ ತೊಡಗಿಕೊಳ್ಳುವುದು ಸಾಧ್ಯವಾಯಿತು. ಎಚ್. ವೈ. ಸರಸ್ವತಮ್ಮ, ವೇದವತಿ ರಾವ್ ಮತ್ತು ಕೆ.ಟಿ. ಬನಶಂಕರಮ್ಮ ಅವರುಗಳನ್ನು ಈ ದೃಷ್ಟಿಯಿಂದ ಗ್ರಹಿಸಬಹುದಾಗಿದೆ.

ಸರಸ್ವತಮ್ಮನವರು ಹೆಚ್ಚು ಓದಿಲ್ಲದ, ಕಿರಿಯ ವಯಸ್ಸಿನ ಗೃಹಿಣಿಯಾಗಿ ಕಲ್ಯಾಣಮ್ಮನವರ ಸಂಪರ್ಕಕ್ಕೆ ಬಂದರು. ಕಲ್ಯಾಣಮ್ಮನವರ ಪ್ರೇರಣೆ ಮತ್ತು ಪ್ರೋತ್ಸಾಹ, ತರಬೇತಿಗಳಿಂದ ಸ್ವತಂತ್ರವಾಗಿ ಲೇಖನಗಳನ್ನು ಬರೆಯಬಲ್ಲ ವೈಚಾರಿಕ ಶಕ್ತಿಗೆ ಆತ್ಮವಿಶ್ವಾಸಗಳನ್ನು ಗಳಿಸಿದರು. ಬೆಂಗಳೂರಿನಲ್ಲಿ ಕಲ್ಯಾಣಮ್ಮನವರು ಸ್ಥಾಪಿಸಿದ ಮಕ್ಕಳ ಕೂಟದ ಮಾದರಿಯಲ್ಲಿ ಮೈಸೂರಿನಲ್ಲಿ ಮಕ್ಕಳ ಕೂಟವನ್ನು ಕಟ್ಟಿ, ಹದಿನೆಂಟು ವರ್ಷಗಳ ಕಾಲ ಮಕ್ಕಳ ಅದರಲ್ಲೂ ಹೆಣ್ಣು ಮಕ್ಕಳ ಏಳಿಗೆಗೆ ನೆರವಾಗಲು ಶ್ರಮಿಸಿದರು. ಆರು ಮಕ್ಕಳ ತಾಯಿಯಾಗಿ ಕುಟುಂಬದ ಹಿರಿಯ ಹೊಣೆಗಾರಿಕೆಯ ನಡುವೆಯೂ ಪತಿಯ ಸಹಕಾರದಿಂದ ಮಕ್ಕಳ ಕೂಟದ ನಿರ್ವಹಣೆ ಅವರಿಗೆ ಸಾಧ್ಯವಾಯಿತು. "ಮಕ್ಕಳ ಸಚಿತ್ರ ಭಾರತ" ಎಂಬ ಚಿತ್ರಕಥಾ ಗ್ರಂಥವನ್ನು ರಚಿಸಿದ ಅವರು ಕಲ್ಯಾಣಮ್ಮನವರೇ ಮೆಚ್ಚುತ್ತಿದ್ದ "ವೀರವನಿತೆ"ಯೇ ಎನ್ನಬಹುದು.

ವೇದವತಿ ರಾಮಚಂದ್ರರಾವ್ ಎಳೆಯ ವಯಸ್ಸಿನಿಂದ ಕಲ್ಯಾಣಮ್ಮನವರ ನೆರೆಯ ಬಾಲಕಿಯಾಗಿ, ಗುರು ಭಾವನೆಯಿಂದ ಅವರ ಸೇವೆ ಮಾಡಿ ಅವರ "ಸರಸ್ವತಿ"ಯ ಕಾರ್ಯಗಳಿಗೆ ಸಹಾಯ ಮಾಡುತ್ತಾ ಬೆಳೆದಾಕೆ. ಸಾರ್ವಜನಿಕ ವೇದಿಕೆಗಳಲ್ಲಿ ಭಾಷಣ ಮಾಡಲು, ಸಾಹಿತ್ಯವನ್ನು ರಚಿಸಲು ಕಲ್ಯಾಣಮ್ಮ ಇವರಿಗೇ ವಿಶೇಷವಾಗಿ ಪ್ರೋತ್ಸಾಹ, ಬೆಂಬಲಗಳನ್ನು ನೀಡಿದ್ದರು. ಎಷ್ಟೋ ವೇದಿಕೆಗಳಲ್ಲಿ ತಾವು ಮಾಡಬೇಕಾಗಿದ್ದ ಉಪನ್ಯಾಸಗಳಿಗೆ ಇವರನ್ನೇ ತರಬೇತುಗೊಳಿಸಿ ಮಾತನಾಡಲು ಅವಕಾಶ ನೀಡುತ್ತಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಮಹಿಳಾ ವಿಭಾಗದ ಹೊರೆ ಹೊರುವಂತೆ ಮಾಡಿದ್ದರು. ಇವರ ಸ್ತ್ರೀ ಸುಧಾರಣಾ ಯತ್ನಗಳನ್ನು ಜೊತೆಯಲ್ಲಿದ್ದು ಕಂಡಿದ್ದ ವೇದವತಿಯವರು ಮುಂದೆ ವಿವಾಹವಾಗಿ ಪತಿಯೊಂದಿಗೆ ಊರೂರು ಸುತ್ತಬೇಕಾಗಿ ಬಂದಾಗ ಕಲ್ಯಾಣಮ್ಮನವರ ಸಂಪರ್ಕದಿಂದ ದೂರವಾದರು. ಆದರೆ ಕುಮಟಾ ಬಳ್ಳಾರಿ ಮುಂತಾದ ಸ್ಥಳಗಳಲ್ಲಿ ಸ್ತ್ರೀ ಸಮಾಜಗಳನ್ನು ಕಟ್ಟುವಲ್ಲಿ ವೇಶ್ಯೆಯರು, ಸ್ತ್ರೀ ಅಪರಾಧಿಗಳು ಮುಂತಾದವರ ಜೀವನ ಸುಧಾರಣಾ ಯತ್ನಗಳಲ್ಲಿ ಗಮನಾರ್ಹ ಕಾರ್ಯಗಳನ್ನು ನಡೆಸುವ ಮೂಲಕ ಕಲ್ಯಾಣಮ್ಮನವರು ಹುಟ್ಟು ಹಾಕಿದ ಸುಧಾರಣಾ ಯತ್ನಗಳನ್ನು ಮುಂದುವರೆಸಿದರು.

ಬನಶಂಕರಮ್ಮನವರು ಬದಲಾದ ರಾಜಕೀಯಾರ್ಥಿಕ ಸಾಮಾಜಿಕ ಪರಿಸರದಲ್ಲೂ ಇಂದಿನ ಅಗತ್ಯಗಳಿಗೆ ತಕ್ಕಂತೆ ಮಕ್ಕಳ ಕೂಟವನ್ನು ಮುಂದುವರೆಸುತ್ತಿರುವ ಕಲ್ಯಾಣಮ್ಮನವರ ಮತ್ತೊಬ್ಬ ಶಿಷ್ಯೆಯಾಗಿದ್ದಾರೆ. ಇಷ್ಟರಮಟ್ಟಿಗೆ ಕಲ್ಯಾಣಮ್ಮನವರ ಆಶಯವು ಅವರ ಮುಂದಿನ ತಲೆಮಾರಿನಲ್ಲೂ ಮುಂದುವರೆಯಿತೆಂಬುದನ್ನು ಗುರುತಿಸಬಹುದಾಗಿದೆ.



# ಸಾರ್ವಜನಿಕ ಸೇವೆ

ಕಲ್ಯಾಣಮ್ಮನವರು ಸ್ತ್ರೀಯರ ಮತ್ತು ಮಕ್ಕಳ ಶ್ರೇಯೋಭಿವೃದ್ಧಿಗಾಗಿ ಮುಖ್ಯವಾಗಿ ಸಂಘಗಳನ್ನು ಕಟ್ಟಿ ಶ್ರಮಿಸಿದರು. ಇವರ ಈ ಸೇವಾ ಮನೋಭಾವ ಅಷ್ಟಕ್ಕೇ ಪರಿಮಿತವಾಗದಂತೆ ಹಲವು ವಿಧವಾದ ಸಾರ್ವಜನಿಕ ಸೇವೆಯ ಅವಕಾಶಗಳು, ಪದಂತಿಗಳು ಅವರಿಗೆ ಲಭ್ಯ ವಾದವು. ಬಹಳಷ್ಟು ಸಂದರ್ಭಗಳಲ್ಲಿ ಮಹಿಳೆಯರು ಯಾವುದಕ್ಕೂ ಮುಂದಾಗುತ್ತಿರಲಿಲ್ಲವಾಗಿ ಮುಂದುವರೆದ ಮಹಿಳೆಯೆನಿಸಿದ್ದ ಕಲ್ಯಾಣಮ್ಮನವರನ್ನೇ ಜನ ತಮ್ಮ ಎಲ್ಲ ಸಮಿತಿ, ಸಂಘಗಳಿಗೆ ಸ್ತ್ರೀ ಪ್ರತಿನಿಧಿಯೆಂದು ಆಹ್ವಾನಿಸುತ್ತಿದ್ದುದು ಸಹಜ. ಆದರೆ ಮಹಿಳೆಯರು ಯಾವುದೇ ಕಾರ್ಯವನ್ನೂ ದಕ್ಷತೆಯಿಂದ ನಿರ್ವಹಿಸಿ ನಡೆಸಬಲ್ಲರು ಎಂಬುದನ್ನು ಮಾಡಿ ತೋರಿಸಬೇಕು. ಎಂಬ ಛಲ ಸ್ವತಃ ಕಲ್ಯಾಣಮ್ಮನವರಲ್ಲೂ ಇತ್ತು. ಆದ್ದರಿಂದ ಅವರು ತಮಗೆ ಎದುರಾದ ಅವಕಾಶಗಳನ್ನು ನಿರಾಕರಿಸಲಿಲ್ಲ. ಬದಲಾಗಿ ಅಂಥ ವಿವಿಧ ಕ್ಷೇತ್ರಗಳನ್ನು ಪ್ರವೇಶಿಸಿ, ಅದಕ್ಕೆ ಸಂಬಂಧಿಸಿದ ಸಮಸ್ಯೆ, ಕುಂದು ಕೊರತೆಗಳನ್ನು ಗ್ರಹಿಸಿ ನಿವಾರಿಸಲು ರಚನಾತ್ಮಕವಾಗಿ ಯತ್ನಿಸಿದ ಬಗೆ ನಿಜಕ್ಕೂ ಮಾದರಿಯ ರೂಪದೆನ್ನಬಹುದು.

ಬೆಂಗಳೂರು ನಗರದ ಪುರಸಭೆಗೆ ಚುನಾವಣೆಯಲ್ಲಿ ಸ್ಪರ್ಧಿಸಿ ಗೆದ್ದು ಬಂದದ್ದು ಕಲ್ಯಾಣಮ್ಮನವರ ವಿಶೇಷ ಸಾಧನೆಗಳಿಗೆ ಜನರಿಂದ ದೊರೆತ ಪ್ರತಿಕ್ರಿಯೆಯೆನ್ನಬಹುದು. ೧೯೩೩ರಲ್ಲಿ ಹೀಗೆ ಪುರಸಭೆಗೆ ಸದಸ್ಯೆಯಾದಾಗ ಕಲ್ಯಾಣಮ್ಮ ಕಾರ್ಯ ನಿರ್ವಹಿಸಿರುವ ಬಗೆಯನ್ನು ಇಂದಿಗೂ ನಗರ ಸಭೆಯ ಕಾರ್ಯಕಲಾಪಗಳ ದಾಖಲೆಗಳಲ್ಲಿ ಕಾಣಬಹುದಾಗಿದೆ. ಅಲ್ಲಿನ ಚರ್ಚೆಗಳಲ್ಲಿ ಶಿಕ್ಷಣ ನಗರ ನೈರ್ಮಲ್ಯ, ಆರೋಗ್ಯ ಮತ್ತು ನಾಗರೀಕ ಸವಲತ್ತುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಕಲ್ಯಾಣಮ್ಮನವರ ಪ್ರಗತಿಪರತೆ ಗಮನಾರ್ಹವಾಗಿದೆ. ಮುನಿಸಿಪಲ್ ಕಛೇರಿಗಳಿಗೆ ಹಿಂದೆ ಒದಗಿಸುತ್ತಿದ್ದ ತಾಮ್ರದ ಸ್ವರ್ಣ ಫಲಕಗಳಿಗೆ ಸುಮಾರು ಮೂರು ಸಾವಿರದ ಐನೂರು ರೂಪಾಯಿಗಳ ವೆಚ್ಚದಲ್ಲಿ ಐವತ್ತು ತೊಲದಷ್ಟು ಚಿನ್ನದಿಂದ ಲೇಪನ ಮಾಡಿಸಬೇಕು ಎಂಬುದೊಂದು ವಿಷಯ ಚರ್ಚೆಗೆ ಬಂದಾಗ ಕಲ್ಯಾಣಮ್ಮ ವಿರೋಧಿಸಿ ತಮ್ಮ ಮತ ಚಲಾಯಿಸಿದ್ದರು.

ಮುನಿಸಿಪಾಲಿಟಿಗೆ ಸರ್ಕಾರದಿಂದ ಒಬ್ಬ ಆರ್ಥಿಕ ತಜ್ಞರನ್ನು ಡೆಪ್ಯೂಟ್ ಮಾಡಿ ಆ ಸಂಸ್ಥೆಯ ದೋಷಗಳನ್ನು ಪರಿಶೀಲಿಸಲು ನೆರವಾಗಬೇಕೆಂಬ ಸಲಹೆಯನ್ನು ಬೆಂಬಲಿಸಿದ್ದರು.

ನಗರ ಸುಧಾರಣಾ ಸಮಿತಿಗೆ ಸುಧಾರಣಾ ಕಾಣಿಕೆಯಾಗಿ ಖಚಿತವಾದ ಹಣದ ಮೊತ್ತವನ್ನು ಗೊತ್ತು ಮಾಡುವ ನಿರ್ಣಯದ ಪರವಾಗಿ ಮತ ಚಲಾಯಿಸಿದ್ದರು.

ಮುನಿಸಿಪಲ್ ಹೆಲ್ತ್ ಕಮಿಟಿಗೆ ಒಬ್ಬ ಸಹ ಆರೋಗ್ಯಾಧಿಕಾರಿಯ ಸೇವೆ ಅಗತ್ಯ, ನಗರವನ್ನು ಎಲ್ಲ ದಿಕ್ಕುಗಳಲ್ಲಿ ಬದಾಯಿಸಲು, ಹೋಟೆಲ್ ಮುಂತಾದವುಗಳಿಗೆ ಲೈಸೆನ್ಸ್ ನೀಡಲು ಇಂಥ ನೇಮಕ ಅಗತ್ಯವಿದೆಯೆಂದು ಸೂಚನೆಯನ್ನು ಕಲ್ಯಾಣಮ್ಮ ಬೆಂಬಲಿಸಿದ್ದರು.

ರಾಮಕೃಷ್ಣಪುರಂ ಬಡಾವಣೆಗೆ ಒಂದು ಶಾಲೆ ಅಗತ್ಯವೆಂಬ ನಿರ್ಣಯಕ್ಕೆ ಪರವಾಗಿದ್ದರು. ಮುಸ್ಲಿಂ ಶಿಕ್ಷಣ ಸಮಿತಿಗೆ ಸದಸ್ಯೆಯರಾಗಿದ್ದರು. ನಗರದ ಒಳಚರಂಡಿ ವ್ಯವಸ್ಥೆ ಕಾರ್ಯವನ್ನು ಪುರಸಭೆಯವರು ಸರಿಯಾಗಿ ನಡೆಸಿಲ್ಲ. ಅದಕ್ಕಾಗಿ ವಿಶೇಷ ಅಧಿಕಾರಿಗಳನ್ನು ನೇಮಿಸಬೇಕೆಂಬ ಬೇಡಿಕೆಗೆ ಪರವಾಗಿ ಮತ ಚಲಾಯಿಸಿದ್ದರು. ಹಾಗೆಯೇ ಚಾಮರಾಜಪೇಟೆಯ ಮುಖ್ಯ ರಸ್ತೆಗಳಲ್ಲಿ ಒಳಚರಂಡಿ ವ್ಯವಸ್ಥೆ ಹದಗೆಟ್ಟಿದ್ದುದನ್ನು ಮುನಿಸಿಪಲ್ ಕಮೀಷನರ ಗಮನಕ್ಕೆ ತಂದು. ಅವುಗಳ ದುರಸ್ತಿಯನ್ನು ಬೇಗ ಕೈಗೊಳ್ಳಬೇಕೆಂದು ನಿರ್ಣಯವೊಂದನ್ನು ಕಳುಹಿಸಿದ್ದರು. ನಗರ್ತಪೇಟೆಯಲ್ಲಿ ಚಿನ್ನ ಬೆಳ್ಳಿ ಕರಗಿಸುವುದರಿಂದ ಪರಿಸರ ಮಾಲಿನ್ಯವುಂಟಾಗುತ್ತಿರುವುದರಿಂದ ಅಲ್ಲಿರುವ ಅಂಗಡಿಗಳನ್ನು ಸ್ಥಳಾಂತರಗೊಳಿಸಬೇಕೆಂಬ

ವಿಷಯಕ್ಕೆ ಅವರು ಚಾಲನೆ ನೀಡಿದ್ದರು. ನಗರ ನೀರು ಸರಬರಾಜಿಗೆ ೬0,000 ರೂ ಗಳನ್ನು ಸಾಲ ನಿಧಿಯಿಂದ ನೀಡಬೇಕೆಂಬ ಸೂಚನೆಯು ಪರವಾಗಿದ್ದರು.

ಹೀಗೆ ಸದಸ್ಯೆಯಾಗಿದ್ದಾಗ ಕಲ್ಯಾಣಮ್ಮ ಪುರ ಸಭೆಯ ಕಾರ್ಯಗಳಲ್ಲಿ ತುಂಬ ಶ್ರದ್ಧೆಯಿಂದ ತೊಡಗಿ ಕೊಂಡಿದ್ದು ಮಾರು ವರ್ಷವೇ ಅಂದರೆ ೧೯೩೮ರಲ್ಲಿ ಪುರ ಸಭೆಯ ಉಪಾಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ, ಚುನಾವಣೆಯಲ್ಲಿ ಆಯ್ಕೆಗೊಂಡರು, ಪ್ರತಿಸ್ಪರ್ಧಿ ಅಭ್ಯರ್ಥಿಯಾಗಿದ್ದ ಡಿ. ವೆಂಕಟರಾಮಪ್ಪನವರಿಗೆ ಎಂಟು ಮತಗಳೂ, ಕಲ್ಯಾಣಮ್ಮ ನವರಿಗೆ ಹದಿನೆಂಟು ಮತಗಳೂ ದೊರತಿದ್ದವು. ಅವರ ಈ ಗೆಲುವಿನ ಸಂದರ್ಭದಲ್ಲಿ ಹಿಂದಿನ ಮತ್ತು ಹೊಸ ಅಧ್ಯಕ್ಷರು ನಗರಸಭಾ ಸದಸ್ಯರುಗಳು, ಬೆಂಗಳೂರಿನಂಥ ಮುಖ್ಯ ಪ್ರಾಧಿಕಾರಕ್ಕೆ ಚುನಾಯಿತರಾದ ಕಲ್ಯಾಣಮ್ಮ ನವರು ಆ ರೀತಿ ಉಪಾಧ್ಯಕ್ಷರಾದ ಮೊಟ್ಟ ಮೊದಲ ಮಹಿಳೆಯೆಂದೂ ಅವರಂಥ ಕಾರ್ಯಾಧ್ಯಕ್ಷರನ್ನು ಆರಿಸುವ ಮೂಲಕ ಪುರಸಭೆಯು ತನ್ನನ್ನೇ ಅಭಿನಂದಿಸಿಕೊಂಡಂತಾ ಯಿತೆಂದೂ, ಸದಸ್ಯೆಯಾಗಿದ್ದಾಗ ಒಂದು ದಿನವಾದರೂ ಏನಾದರೂ ಗಮನ ಸೆಳೆವ ಸೂಚನೆ ನೀಡದೆ ಉಳಿದ ಉದಾಹರಣೆ ಕಲ್ಯಾಣಮ್ಮನವರಲ್ಲಿ ಕಾಣಲಿಲ್ಲವೆಂದೂ ಪ್ರಶಂಸಿಸಿದ್ದರು. ಈ ದಕ್ಷತೆಯ ಕಾರಣಕ್ಕಾಗಿ ನಗರ ಆರೋಗ್ಯ ಸಮಿತಿಗೆ ಅಧ್ಯಕ್ಷರಾಗಿ, ಲಂಗರ್‌ಖಾನೆ ಸಮಿತಿಗೆ ಸದಸ್ಯೆಯಾಗಿ ಕಾರ್ಯ ನಿರ್ವಹಿಸುವ ಅವಕಾಶ ಅವರಿಗೆ ಲಭಿಸಿತ್ತು.

ನಗರಸಭೆಯ ಪೌರಕಾರ್ಯಗಳ ನಿರ್ವಹಣೆಯಲ್ಲಿ ಬೀದಿ ಬೀದಿಗೆ ಹೋಗಿ ಜನರ ಕಷ್ಟ-ಸುಖ ವಿಚಾರಿಸಿ ಪರಿ ಹಾರಕ್ಕೆ ಶ್ರಮಿಸಿದ್ದವರು ಕಲ್ಯಾಣಮ್ಮ. ಈ ರೀತಿ ಕಾರ್ಯತತ್ಪರತೆ ಅವರ ಸ್ವಭಾವದಲ್ಲೇ ಇದ್ದ ಗುಣ ವಾಗಿತ್ತು. ಆದ್ದರಿಂದಲೇ ಯಾವುದೇ ಸಾರ್ವಜನಿಕ ಕಾರ್ಯಕ್ಷೇತ್ರದ ಪದವಿ ಅವರಿಗೆ ದೊರೆತರೂ ಅದರಲ್ಲಿ ತನ್ಮಯತೆಯಿಂದ ದುಡಿದಿದ್ದಾರೆ.

೧೯೩೦ರಲ್ಲಿ ಪಠ್ಯಪುಸ್ತಕ ಸಮಿತಿಯ ಸದಸ್ಯೆಯಾಗಿ ದ್ದಾಗ ಪ್ರಾಥಮಿಕ ಶಿಕ್ಷಣದಲ್ಲಿ ಮಕ್ಕಳ ಅರಿವಿಗೆ ಎಟಕು ವಂಥ ಸರಳ ಭಾಷೆಯ ಪಠ್ಯಗಳನ್ನು ಅಳವಡಿಸಲು ಕಾರಣ ರಾಗಿದ್ದರು, ಮುನಿಸಿಪಲ್ ಸ್ಕೂಲ್ ಬೋರ್ಡ್ ಸದಸ್ಯೆ ಯಾದಾಗ ಬೆಂಗಳೂರಿನಲ್ಲಿದ್ದ ಸುಮಾರು ಇನ್ನೂರು ಶಾಲೆಗಳಿಗೆ ಭೇಟಿ ಕೊಟ್ಟು ಅಲ್ಲಿನ ಅಗತ್ಯಗಳು, ಕುಂದು-ಕೊರತೆಗಳನ್ನು ಪರಿಶೀಲಿಸಿ, ಅದರ ಬಗ್ಗೆ ಸರಕಾರಕ್ಕೆ ವರದಿಮಾಡಿ, ಪರಿಹಾರಕ್ಕೆ ಯತ್ನಿಸಿದ್ದರು.

೧೯೩೩ರಲ್ಲಿ ಗೌರವ ನ್ಯಾಯಾಧೀಶ ಹುದ್ದೆಗೆ ಆಯ್ಕೆಯಾಗಿ ಹದಿನೈದು ವರ್ಷ ಆ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದರು. ಆ ಅವಧಿಯಲ್ಲಿ ಸ್ತ್ರೀಯರ ಮತ್ತು ಮಕ್ಕಳ ಕೇಸುಗಳಿಗೆ ಆದ್ಯತೆ ನೀಡಿ, ಅವುಗಳ ಶೀಘ್ರ ನಿರ್ಣಯಕ್ಕಾಗಿ ಒತ್ತಾಯಿಸುತ್ತಿದ್ದುದು ಆ ಬಗ್ಗೆ ಅವರಿಗಿದ್ದ ಕಳಕಳಿಯ ದ್ಯೋತಕವಾಗಿದೆ. ಕಲ್ಯಾಣಮ್ಮ ನವರು ನೀಡುತ್ತಿದ್ದ ತೀರ್ಪು ತುಂಬ ಸಮರ್ಪಕವೆನಿಸಿದ್ದು ಜೊತೆಯ ಪುರುಷ ಸಹೋದ್ಯೋಗಿಗಳ ಪ್ರಶಂಸೆಗೂ ಪಾತ್ರವಾಗುತ್ತಿತ್ತು ಮಕ್ಕಳಕೂಟ ಪುರಸಭೆ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಇವರೊಂದಿಗೆ ದುಡಿದಿದ್ದ ಡಿ. ಸಿ. ಸುಬ್ಬರಾಯಪ್ಪನವರು ಕಲ್ಯಾಣಮ್ಮನವರ ಈ ನ್ಯಾಯ ನಿರ್ಣಯವನ್ನು ಸಾರ್ವಜನಿಕವಾಗಿ ಪ್ರಶಂಸಿಸಿದ್ದಾರೆ.

ತಮ್ಮ ಜೀವಿತ ಕಾಲದಲ್ಲಿ ಬೆಂಗಳೂರಿನಲ್ಲಿದ್ದ ಪ್ರತಿ ಯೊಂದು ಪ್ರಗತಿಪರ ಸಂಘಸಂಸ್ಥೆಗಳಲ್ಲಿ ಒಂದಲ್ಲ ಒಂದು ರೀತಿ ಕಲ್ಯಾಣಮ್ಮನವರು ಸೇವೆ ಸಲ್ಲಿಸಿದ್ದಾರೆ. ಮಹಿಳಾ ಸೇವಾ ಸಮಾಜ, ಅಶಕ್ತ ಪೋಷಕ ಸಭಾ, ಸಿವಿಕ್ ಅಂಡ್ ಪ್ರೋಗ್ರೆಸ್ ಸೊಸೈಟಿ, ಲಂಗರ್‌ಖಾನೆ, ಅಬಲಾಶ್ರಮ, ಥಿಯಾಸಫಿಕಲ್ ಸೊಸೈಟಿ, ಮುಂತಾದ ಅನೇಕ ಸಂಸ್ಥೆ ಗಳಲ್ಲಿ ಕ್ರಿಯಾಶೀಲ ಸದಸ್ಯೆಯಾಗಿ ದುಡಿದವರು ಅವರು. ಹೀಗೆ ಸಾರ್ವಜನಿಕ ಸೇವಾಕ್ಷೇತ್ರಗಳಿಗೆ ಅವರ ಸೇವೆಯನ್ನು ತಡವಾಗಿಯಾದರೂ ಅಂದಿನ ಮೈಸೂರು ಸರ್ಕಾರ ಗುರು ತಿಸಿತ್ತು, ೧೯೩೫ ರಲ್ಲಿ ಅವರಿಗೆ "ಸಾರ್ವಜನಿಕ ಸೇವಾ ಪದಕ" ಕೊಟ್ಟು ಮೈಸೂರು ಸಂಸ್ಥಾನದ ಪ್ರಜಾಪ್ರತಿ ನಿಧಿಗಳ ಸಭೆಯ ಗೌರವ ಸದಸ್ಯತ್ವವನ್ನೂ ನೀಡಿ ಸನ್ಮಾ ನಿಸಿತ್ತು, ಈ ಪ್ರಜಾಪ್ರತಿನಿಧಿ ಸಭೆಯ ಚರ್ಚೆಗಳಲ್ಲಿಯೂ ಬಡವರು, ವಿಧವೆಯರು, ನಿರ್ಗತಿಕ ಮಹಿಳೆಯರ ಏಳಿಗೆ ಗಾಗಿಯೇ, ಕಲ್ಯಾಣಮ್ಮ ಯತ್ನಿಸಿದ್ದುದನ್ನು ಸರಸ್ವತಿ ಪತ್ರಿಕೆಯಲ್ಲಿನ ಹಲವಾರು ವರದಿಗಳಲ್ಲಿ ಕಾಣಬಹು ದಾಗಿದೆ. O

# ಕಲ್ಯಾಣಮ್ಮನವರ "ಸರಸ್ವತಿ"

ಆಧುನಿಕ ಕನ್ನಡದ ಮೊದಲ ಲೇಖಕಿಯರಲ್ಲಿ ಪ್ರಮುಖರಾದ ಕಲ್ಯಾಣಮ್ಮ, ತಮ್ಮ ಕಾಲದ ಅನೇಕ ಪ್ರಗತಿಪರ ಮಹಿಳೆಯರಂತೆ, ತಮ್ಮ ವಿಚಾರವನ್ನು ಪ್ರಸಾರ ಮಾಡಲು, ಸ್ತ್ರೀ ಸಮುದಾಯಕ್ಕೆ ವಿಚಾರ ಜಾಗೃತಿಯನ್ನು ಉಂಟುಮಾಡಲು ಮಹಿಳಾ ಪತ್ರಿಕೆಯೊಂದನ್ನು ಪ್ರಾರಂಭಿಸಿದರು.

ತಮ್ಮ ಪತ್ರಿಕೆಯು ಮಹಿಳೆಯರಿಗಾಗಿ ಮಹಿಳೆಯರಿಂದಲೇ ಪ್ರಕಟಿಸಲ್ಪಡಬೇಕು. "ದೇಶ ಭಾಷೆ"ಯಲ್ಲಿರಬೇಕು "ಸಚಿತ್ರ"ವಾಗಿರಬೇಕು, "ಆರ್ಯ ಮಹಿಳೆಯರ ಉನ್ನತ ಪರಂಪರೆಯನ್ನು" ಮಹಿಳೆಯರಿಗೆ ತಿಳಿಸಿ, ಆ ದಿಕ್ಕಿನಲ್ಲಿ ಮಾರ್ಗದರ್ಶನ ಮಾಡುವಂತಿರಬೇಕು. ಎಂಬ ಸ್ಪಷ್ಟ ವಿಚಾರದೊಂದಿಗೆ "ಸರಸ್ವತಿ"ಯನ್ನು ಕಲ್ಯಾಣಮ್ಮ ಆರಂಭಿಸಿದರು. ೧೯೧೬ರ ಸೆಪ್ಟೆಂಬರ್‌ನಲ್ಲಿ ಮೊದಲ ಬಾರಿಗೆ "ಸರಸ್ವತಿ" ಹೊರ ಬಂದಾಗ ಅದು ಪಕ್ಷ ಪತ್ರಿಕೆಯಾಗಿತ್ತು. ಕಿರೀಟ ಅಷ್ಟಪತ್ರಾಕಾರದ ಮೂವತ್ತಾರು ಪುಟಗಳಿದ್ದು, ಉತ್ತಮ ಲೇಖನಗಳು, ಛಾಯಾಚಿತ್ರ ಮುದ್ರಣವನ್ನು ಒಳಗೊಂಡಿದ್ದರೂ ಒಂದೆರಡು ವರ್ಷ ಕುಂಟುತ್ತ ನಡೆದು, ನಿಲ್ಲಬೇಕಾಗಿ ಬಂತು. ಮತ್ತೆ ೧೯೨೦ರಲ್ಲಿ "ಸರಸ್ವತಿ"ಯನ್ನು ಮಾಸ ಪತ್ರಿಕೆಯಾಗಿ ಹೊರ ತರತೊಡಗಿದರು. ಅಲ್ಲಿಂದ ಮುಂದೆ ಎಷ್ಟೋ ವಿಧವಾದ ಆರ್ಥಿಕ ಮುಗ್ಗಟ್ಟಿನ ನಡುವೆಯೂ ನಿಲ್ಲದೆ ನಲವತ್ತ ಮೂರು ವರ್ಷ ನಡೆದ ಮಹಿಳಾ ಮಾಸ ಪತ್ರಿಕೆ ಅದೊಂದೇ ಎನ್ನಬಹುದು.

ಸ್ತ್ರೀಯರ ಶೈಕ್ಷಣಿಕ ಜಾಗೃತಿಯನ್ನೇ ಮುಖ್ಯ ಗುರಿಯಾಗಿಟ್ಟುಕೊಳ್ಳುವಲ್ಲಿ ಕಲ್ಯಾಣಮ್ಮನವರಿಗೆ ಬಂಗಾಳದ "ಭಾರತಿ" ಎಂಬ ಪತ್ರಿಕೆ ಸ್ವಲ್ಪ ಮಟ್ಟಿಗೆ ಮಾದರಿಯಾಗಿರಬಹುದು. ಎಂಬುದನ್ನು ಅವರ ಮೊಟ್ಟ ಮೊದಲ ಪೀಠಿಕಾ ರೂಪದ ಸಂಪಾದಕೀಯದಿಂದ ಅರಿಯಬಹುದು. ವಿದ್ಯಾರ್ಥಿನಿಯಾಗಿದ್ದಾಗಿನಿಂದಲೂ ಇಂಥ ಪತ್ರಿಕೆ ತರಬೇಕೆಂಬ ಹಂಬಲ ಅವರಿಗಿತ್ತೆಂದೂ ಅವರು ಹೇಳಿದ್ದಾರೆ. ಇಂದಿನ ದೃಷ್ಟಿಯಿಂದ ಈ " ಸರಸ್ವತಿ " ಪತ್ರಿಕೆಯ ಸಂಚಿಕೆಗಳು ಹಲವು ದಿಕ್ಕಿನ ಸಾಂಸ್ಕೃತಿಕ ಕುತೂಹಲವನ್ನು ಹುಟ್ಟಿಸುತ್ತವೆ.

ಪತ್ರಿಕಾ ಸಂಪಾದಕಿಯಾಗಿ, ತಮ್ಮ ನಿಕಟ ಸಂಪರ್ಕಕ್ಕೆ ಬಂದ ಆಪ್ತ ಮಿತ್ರರು ಹಿತೈಷಿಗಳ ನೆರವು ಪಡೆದು ಕಲ್ಯಾಣಮ್ಮ ನಡೆಸಿದ ಕಾರ್ಯ ಅತ್ಯಂತ ಮಹತ್ವಪೂರ್ಣವಾದದ್ದು. ಇದರ ಲೇಖನಗಳ ಗುರಿ ಸ್ತ್ರೀಯರ ಏಳಿಗೆ, ಆ ದೃಷ್ಟಿಯಿಂದ ಬರೆದ ಲೇಖನ ಸ್ತ್ರೀಯರದಿರಲಿ, ಪುರುಷರದಿರಲಿ ಕಲ್ಯಾಣಮ್ಮ ಅದಕ್ಕೆ ಪ್ರಾಶಸ್ತ್ಯ ನೀಡುತ್ತಿದ್ದರು ಅವರ ಸಮಕಾಲೀನರಾಗಿದ್ದ ಹಲವಾರು ಪ್ರಸಿದ್ಧ ಲೇಖಕ ಲೇಖಕಿಯರು, ಪಂಡಿತರು, ದಾರ್ಶನಿಕರು, ಸಮಾಜ ಸೇವಾಸಕ್ತರು, ವಿವಿಧ ವೃತ್ತಿನಿರತ ಬುದ್ಧಿ ಜೀವಿಗಳು ಸರಸ್ವತಿಯ ಪುಟಗಳಲ್ಲಿ ತಮ್ಮ ವಿಚಾರಗಳನ್ನು ಬಿಂಬಿಸಿದ್ದಾರೆ. ಹಾಗೆಯೇ ಅಪಾರ ಸಂಖ್ಯೆಯಲ್ಲಿ ಹೊಸ ಪ್ರತಿಭೆಗಳನ್ನು ಗುರುತಿಸಿ, ಅರಳಿಸಲು ಕಲ್ಯಾಣಮ್ಮ ಯತ್ನಿಸಿದ್ದಾರೆ. ನಾಲ್ಕೂವರೆ ದಶಕಗಳಲ್ಲಿ ಕರ್ನಾಟಕದ ಸಾಂಸ್ಕೃತಿಕ ಬೆಳವಣಿಗೆಯನ್ನು ಸ್ತ್ರೀಯಾತ್ಮಕ ದೃಷ್ಟಿಯಿಂದ ಪ್ರತಿಪಾದಿಸುವ ಅಪರೂಪದ ಸಾಂಸ್ಕೃತಿಕ ದಾಖಲೆಯಾಗಿದೆ ಈ "ಸರಸ್ವತಿ".

ಪತ್ರಿಕೆಯ ಸಂಪಾದಕೀಯಗಳಲ್ಲಿ, ವಿಚಾರಾತ್ಮಕ ಲೇಖನಗಳಲ್ಲಿ ಹಾಗೂ ತಾವು ಬರೆದ ಕಥೆ, ಕಾದಂಬರಿ

ನಾಟಕಗಳಲ್ಲಿ ಕಲ್ಯಾಣಮ್ಮ ಸ್ತ್ರೀ ಜಗತ್ತಿನ ಹಲವಾರು ಸಮಸ್ಯೆಗಳನ್ನು ವಿಶ್ಲೇಷಿಸಿ, ಸಮಾಜವನ್ನು ತಿದ್ದಲು ಯತ್ನಿಸಿದ್ದಾರೆ. ಸಾಹಿತ್ಯವು ಸಮಾಜದ ರೋಗಗಳನ್ನು ಚಿಕಿತ್ಸೆಗೆ ಒಳಪಡಿಸಿ ಸುಧಾರಿಸಬಲ್ಲ ಮಾಧ್ಯಮ ಎಂಬ ನಂಬಿಕೆಯನ್ನು ಅವರು ಹೊಂದಿದ್ದರಿಂದ ("ಆಧುನಿಕ ಕವಿಗಳೂ, ಕವಿತೆಗಳೂ") ಅವರ ಒಟ್ಟು ಬರಹದ ಮುಖ್ಯ ಗುರಿ ಸಮಾಜವನ್ನು ಚಿಕಿತ್ಸಾ ದೃಷ್ಟಿಯಿಂದ ನೋಡುವುದೇ ಆಗಿದೆ.

ಸಂಪಾದಕೀಯಗಳಲ್ಲಿ, ಸಂಪಾದಕೀಯ ಟಿಪ್ಪಣಿಗಳಲ್ಲಿ ತಮ್ಮ ಸುತ್ತಲಿನ ಸ್ಥಳೀಯ, ದೇಶದ ಮತ್ತು ಜಾಗೃತಿಕ ನೆಲೆಗಳ ಆಗು ಹೋಗುಗಳಿಗೆ ಕಲ್ಯಾಣಮ್ಮನವರ ಪ್ರತಿಕ್ರಿಯೆಗಳನ್ನು ಗುರುತಿಸಬಹುದು. "ಪತ್ನಿ ಪುಸ್ತಕಗಳು" "ಮಾತೃ ಭಾಷೆ" "ಮಹಿಳೆಯೂ ದೇಶ ಸೇವೆಯೂ" "ಶಿಕ್ಷಣವು ಎಂಥದ್ದಿರಬೇಕು" ಮುಂತಾದ ಸಂಪಾದಕೀಯಗಳಲ್ಲಿ ಸಾವಜಾಜಿಕ ಸಭೆಗಳ ವಿಭಿನ್ನ ಅಂಶಗಳ ವಿವೇಚನೆಯನ್ನು ಕಾಣುತ್ತೇವೆ. ಬಹುಮಟ್ಟಿಗೆ ಸಾಂಸ್ಕೃತಿಕ ಆಗುಹೋಗುಗಳಿಗೆ ವರದಿಯಂತೆ ಪ್ರಕಟವಾಗುತ್ತಿದ್ದ "ನಮ್ಮ ನುಡಿಗನ್ನಡಿ" ಎಂಬ ಅಂಕಣವು ಮುಖ್ಯವಾಗಿ ಸಂಪಾದಕರ ಟಿಪ್ಪಣಿಗಳಾಗಿದ್ದು ಅನೇಕ ಕುತೂಹಲಕಾರಿ ಅಂಶಗಳನ್ನು ನಮಗೆ ಒದಗಿಸುತ್ತವೆ.

ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆದ ಸಾಹಿತ್ಯ ಸಮ್ಮೇಳನ, ಚಕ್ರವರ್ತಿ ರಾಜಗೋಪಾಲಚಾರಿಯವರ ಕರ್ನಾಟಕದ ಭೇಟಿ, ಮೈಸೂರಿನ ತಾತಯ್ಯ ವೆಂಕಟಕೃಷ್ಣಯ್ಯನವರ ವರ್ಧಂತಿ, ಅಣ್ಣಾಮಲೆ ಸಂಗೀತ ಕಲಾಶಾಲೆ, ಮೈಸೂರಿನ ಪ್ರಜಾಪ್ರತಿನಿಧಿಗಳ ಸಭೆಯ ಚರ್ಚೆಗಳಲ್ಲಿ ವಿಧವಾ ವಿವಾಹದ ಬಗ್ಗೆ ಜನರ ಪ್ರತಿಕ್ರಿಯೆ ಶಾರದಾ ಬಿಲ್ಲು ಜಾರಿಗೆ ಬಂದಾಗ ಮಡಿವಂತರ ಪ್ರತಿಕ್ರಿಯೆ, ಮೈಸೂರು ಸಂಸ್ಥಾನದ ಸರ್ಕಾರ ಕೈಗೊಳ್ಳುತ್ತಿದ್ದ ಆರ್ಥಿಕ ಯೋಜನೆಗಳು ಮುಂತಾದ ಹಲವಾರು ಐತಿಹಾಸಿಕ, ಸಾಂಸ್ಕೃತಿಕ ವಿವರಗಳನ್ನು ಟಿಪ್ಪಣಿಸಿರುವ ಈ ವಿಭಾಗದಲ್ಲಿ ಕಲ್ಯಾಣಮ್ಮನವರ ವಿಚಾರಗಳು ಯಾವಾಗಲೂ ಸ್ತ್ರೀಯರ, ಸಮಾಜದ, ದೇಶದ ಪ್ರಗತಿಯತ್ತ ಮುಖಮಾಡಿರುತ್ತಿದ್ದುದನ್ನು ಗುರುತಿಸಬಹುದು.

ಅನೇಕ ಸಂಪಾದಕೀಯಗಳು ಸರಸ್ವತಿಯ ಹಂತ ಹಂತವಾದ ಬೆಳವಣಿಗೆ, ಅದಕ್ಕೆ ಉದ್ದಕ್ಕೂ ಇದ್ದ ಆರ್ಥಿಕ ಮುಗ್ಗಟ್ಟು, ಚಂದಾದಾರರ ಅಭಾವವನ್ನು ಬಿಂಬಿಸುತ್ತವೆ. ಆ ತೊಂದರೆಗಳೆಲ್ಲದರ ನಡುವೆಯೂ ತಮ್ಮ ಪತ್ರಿಕೆಯನ್ನು ಆದಷ್ಟು ಹೆಚ್ಚು ಜನ ಮಹಿಳೆಯರಿಗೆ ಉಪಯುಕ್ತ ಜ್ಞಾನ ಸಾಧನವನ್ನಾಗಿ ಮಾಡಬೇಕು. ಅದರ ಅಂದ, ಆಕಾರ, ಗುಣಮಟ್ಟಗಳನ್ನು ಸುಧಾರಿಸಬೇಕು ಎಂಬ ಕಲ್ಯಾಣಮ್ಮನವರ ಕಳಕಳಿಯನ್ನು, ಆ ದಿಕ್ಕಿನಲ್ಲಿ ಅವರು ಕೈಗೊಂಡ ಕಾರ್ಯಗಳನ್ನು ಕುರಿತು ಸೂಚನೆ ನೀಡುತ್ತವೆ. ಪತ್ರಿಕೆ ಬೆಳೆದು ಬಂದ ಇತಿಹಾಸವನ್ನು ಅವರೇ ಹಲವಾರು ಸಂದರ್ಭಗಳಲ್ಲಿ ದಾಖಲಿಸಿದ್ದಾರೆ. ಮೊದಲಿಗಿದ್ದ ಆರ್ಥಿಕ ತೊಂದರೆ ಕೊನೆಗೆ ನಿವಾರಣೆಯಾದರೂ ಸ್ತ್ರೀಯರು ಸಮಗ್ರವಾಗಿ ಈ ಪತ್ರಿಕೆಯನ್ನು ತಮ್ಮದನ್ನಾಗಿ ಮಾಡಿಕೊಳ್ಳಲಿಲ್ಲ, ಇದರಲ್ಲಿ ತಮ್ಮ ವಿಚಾರ ಅನುಭವಗಳಿಗೆ ತಕ್ಕ ಪ್ರಮಾಣದ ಅಭಿವ್ಯಕ್ತಿ ನೀಡಲು ಮುಂದೆ ಬರುತ್ತಿಲ್ಲವೆಂಬ ಕೊರಗನ್ನೂ ಅವರು ವ್ಯಕ್ತಪಡಿಸಿದ್ದಾರೆ.

ಸ್ವಂತದ ಲೇಖನಗಳಲ್ಲದೆ, ಬೇರೆ ಭಾಷೆಗಳಿಂದ ಆಯ್ದು ಅನುವಾದಿಸಿ ಪ್ರಕಟಿಸಿರುವ ಲೇಖನಗಳ ಆಯ್ಕೆಯಲ್ಲಿ ಕಲ್ಯಾಣಮ್ಮನವರ ವಿಚಾರಗಳನ್ನು ಅವು ಹೋಲುತ್ತವೆ ಎಂಬುದೂ ಮುಖ್ಯ ಕಾರಣವಾಗಿದ್ದಂತೆ ತೋರುತ್ತವೆ. "ಹಿಂದೂ ಸ್ತ್ರೀಯರ ಆದರ್ಶಗಳು" "ಇಂದಿನ ಚೈನಾ ಮಹಿಳೆಯರು" ಮುಂತಾದ ಲೇಖನಗಳನ್ನು ಉದಾಹರಿಸಬಹುದು ಇತರ ಲೇಖಕ/ಲೇಖಕಿಯರ ವಿಚಾರಾತ್ಮಕ ಲೇಖನಗಳ ಆಯ್ಕೆಯಲ್ಲೂ ಹೀಗೆಯೇ ಕಲ್ಯಾಣಮ್ಮನವರ ನಂಬಿಕೆಗಳನ್ನೇ ಬೆಂಬಲಿಸುವ, ವಿಸ್ತರಿ

ಸುವ ಅಥವಾ ಮುಂದುವರೆಸುವ ಧೋರಣೆಯನ್ನು ಕಾಣಬಹುದು.

ಸ್ತ್ರೀ ಸಂಬಂಧಿತ ವಿಚಾರಗಳಷ್ಟೇ ಪ್ರಾಧಾನ್ಯವನ್ನು ಮಕ್ಕಳ ಕ್ಷೇಮಾಭಿವೃದ್ಧಿಗೆ ನೀಡಿರುವ ಕಲ್ಯಾಣಮ್ಮ 'ಮಕ್ಕಳ ಆಟಪಾಟಗಳು, ಪುಸ್ತಕ ಭಂಡಾರಗಳು, ಮಾದರಿ ಶಾಲೆಗಳು, ಮಕ್ಕಳನ್ನು ಬೆಳೆಸುವ ಪೋಷಿಸುವ ವೈಜ್ಞಾನಿಕ ರೀತಿನೀತಿಗಳು, ಮಕ್ಕಳ ಮನೋವಿಜ್ಞಾನ, ಮುಂತಾದ ವಿಚಾರಗಳನ್ನೊಳಗೊಂಡ ಲೇಖನಗಳಿಗೇ ಸರಸ್ವತಿಯಲ್ಲಿ ಸ್ಥಾನವಿತ್ತಿದ್ದಾರೆ. ಮಕ್ಕಳ ಸೃಜನಶೀಲ ಪ್ರತಿಭೆಯ ಅಭಿವೃದ್ಧಿಗಾಗಿ ಎಂಟು ಪುಟಗಳನ್ನು ಮೀಸಲಿಟ್ಟು, ಮಕ್ಕಳ ಬಾವುಟದಲ್ಲಿ ಕರ್ನಾಟಕದ ಎಲ್ಲ ಸೀಮೆಯ ಮಕ್ಕಳ ಬರಹರೂಪದ ಪ್ರತಿಭೆಯ ವಿಕಾಸಕ್ಕೆ ಅವರು ಕಾರಣರಾಗಿದ್ದಾರೆ.

ಸ್ತ್ರೀ ಸಮಸ್ಯೆಗಳು, ಮಕ್ಕಳ ಸಮಸ್ಯೆಗಳು, ಹೀಗೆ ಸರಸ್ವತಿಯಲ್ಲಿ ಆದ್ಯತೆ ಪಡೆದಿದ್ದರೂ, ಜ್ಞಾನದ ಪ್ರಸಾರಕ್ಕೆ ಯಾವ ಮಿತಿಯೂ ಇರಬಾರದು ಎಂಬ ಧೋರಣೆಯಿದ್ದ ಕಲ್ಯಾಣಮ್ಮ ತಮ್ಮ ಸಮಕಾಲೀನ ಜಗತ್ತಿನ ಎಲ್ಲ ಪ್ರಕಾರದ ಜ್ಞಾನವನ್ನೂ ಮಹಿಳೆಯರಿಗೆ ಒದಗಿಸಲು ಯತ್ನಿಸಿದ್ದಾರೆ. ವೈಜ್ಞಾನಿಕ ಬೆಳವಣಿಗೆಗಳನ್ನ ಪ್ರತಿಪಾದಿಸುವ 'ಪರಮಾಣು ಬ್ಯಾಟರಿ', ಆರ್ಥಿಕ ಬೆಳವಣಿಗೆಯ ದ್ಯೋತಕವಾದ 'ದಶಮಾನ ಪದ್ಧತಿ', ಆರೋಗ್ಯ ಕುರಿತ 'ಸ್ತ್ರೀಯರೂ ವ್ಯಾಯಾಮವೂ', 'ಆಹಾರ ಪದ್ಧತಿ', 'ಗರ್ಭಿಣಿ ಮತ್ತು ಶಿಶುಪಾಲನೆ' ಯಂಥ ಲೇಖನಗಳು, ಸಂಗೀತ, ಸಾಹಿತ್ಯ, ನೃತ್ಯ, ಚಿತ್ರ ಕಥೆ, ಇತಿಹಾಸ ಜಗತ್ತಿನ ವಿವಿಧ ದೇಶಗಳ ಜನಜೀವನದ ರೀತಿನೀತಿಗಳು, ಹೋಳಿಗೆ, ಕಸೂತಿ, ಹೊಸ ಅಡುಗೆ, ಕಿವಿ ಮಾತುಗಳು, ಸುಭಾಷಿತಗಳು, ಹಾಸ್ಯ ಚಟಾಕಿಗಳು ಮುಂತಾದ ವೈವಿಧ್ಯಪೂರ್ಣವಾದ ರಚನೆಗಳಿಂದ ಸ್ತ್ರೀ ಸಮುದಾಯದ ವ್ಯಕ್ತಿತ್ವ ವಿಕಾಸಕ್ಕಾಗಿ ಬಹುವಾಗಿ ಯತ್ನಿಸಿದ್ದಾರೆ.

ಕತೆಗಳು, ಕಾದಂಬರಿಗಳು, ಕವನಗಳು, ನಾಟಕಗಳನ್ನು ಶಿಶುಸಾಹಿತ್ಯವನ್ನು ಸ್ವತಃ ಬರೆದು, ಇತರರಿಂದ ಬರೆಯಿಸಿ ಪ್ರಕಟಿಸುವ ಮೂಲಕ ನಾಲ್ಕು ದಶಕಗಳ ಅವಧಿಯ ಕನ್ನಡ ಸಾಹಿತ್ಯ ಇತಿಹಾಸಕ್ಕೆ ಉತ್ತಮ ದಾಖಲೆಯಾಗುವಂತೆ ಸರಸ್ವತಿಯನ್ನು ಕಲ್ಪಿಸಿದ್ದಾರೆ. ಬೇರೆ ಲೇಖಕ ಲೇಖಕಿಯರ ಸೃಜನಶೀಲ ರಚನೆಗಳನ್ನು ಗಮನಿಸುವಾಗ ಪುರುಷರು ಹೆಚ್ಚಾಗಿ ಕವನಗಳನ್ನೂ, ನಾಟಕಗಳನ್ನು ರಚಿಸಿದ್ದರೆ, ಸ್ತ್ರೀಯರು ಸಣ್ಣಕತೆಗಳತ್ತ ವಿಶೇಷ ಒಲವನ್ನು ಪ್ರಕಟಿಸಿರುವುದನ್ನು ಕಾಣಬಹುದು. ನವೋದಯದ ಪ್ರವರ್ಧಮಾನ ಅವಧಿಯಿಂದ ಆರಂಭಿಸಿ, ಪ್ರಗತಿಶೀಲ, ನವ್ಯ ಪಂಥಗಳ ಬೆಳವಣಿಗೆಗಳವರೆಗೆ "ಸರಸ್ವತಿ" ಪತ್ರಿಕೆಯ ಜೀವಿತಾವಧಿ ಇತ್ತು. ಹಾಗಾಗಿ ಪ್ರಧಾನ ಪಂಥಗಳು ಹುಟ್ಟುಹಾಕುತ್ತಿದ್ದ ಬದಲಾವಣೆಗಳು ಬೆಳವಣಿಗೆಗಳು ಈ ಪತ್ರಿಕೆಯಲ್ಲಿ ಪ್ರತಿಫಲಿಸುವ ಫಲಿಸದಿರುವ ಬಗೆಯನ್ನು ಶೋಧಿಸಲು ಉತ್ತಮ ಅವಕಾಶವನ್ನು ಸರಸ್ವತಿ ಒದಗಿಸುತ್ತದೆ ಎನ್ನಬಹುದು.

"ಸರಸ್ವತಿ"ಯಲ್ಲಿ ಪ್ರಕಟವಾಗಿರುವ ಕಲ್ಯಾಣಮ್ಮನವರ ಸ್ತ್ರೀಪರ ಚಿಂತನೆಗಳು, ಅವರ ಸಂಪಾದಕೀಯಗಳು, ಅವರ ಸಾಹಿತ್ಯ ಕೃತಿಗಳ ಆಯ್ದ ಭಾಗಗಳನ್ನು ಈ ಲೇಖನದ ಜೊತೆ ನೀಡುತ್ತಿರುವುದರಿಂದ ಪ್ರತಿಯೊಂದು ಲೇಖನದ ತಾತ್ಪರ್ಯ ಹೇಳುವ ಯತ್ನವನ್ನು ಮಾಡದಯೇ ಓದುಗರನ್ನೇ ಈ ಬರಹಗಳ ವಿವೇಚನೆಗೆ ತೊಡಗಿಸುತ್ತಿದ್ದೇವೆ. ಒಬ್ಬ ಏಕಾಕಿ ಮಹಿಳೆ, ಹಿಡಿದ ಗುರಿ ಮುಟ್ಟಿಸುವ ಸಂಕಲ್ಪ ಶಕ್ತಿಯೊಂದರ ಬಲದಿಂದ ಹೇಗೆ ತನ್ನ ಸುತ್ತಲಿನ ಜನರನ್ನು ತನ್ನ ವಿಚಾರದತ್ತ ಸೆಳೆಯಲು. ಅವರ ಮನಸ್ಸುಗಳಿಗೆ ಚಾಲನೆ ನೀಡಲು ಯತ್ನಿಸಿದ್ದರು ಎಂಬುದಕ್ಕೆ ನಿದರ್ಶನವಾಗಬಹುದಾದಂತೆ "ಸರಸ್ವತಿ" ಸ್ತ್ರೀಯರ ವ್ಯಕ್ತಿತ್ವ ವಿಕಾಸದ ಅನಂತ ಸಾಧ್ಯತೆಗಳತ್ತ ಓದುಗರನ್ನು ಪ್ರೇರೇಪಿಸಬಲ್ಲ ಉತ್ತಮ ಮಟ್ಟದ ಮಾಧ್ಯಮವಾಗಿದೆ.



# ಅಖಿಲ ಕರ್ನಾಟಕ ಮಕ್ಕಳ ಕೂಟ

ಬೇಸಿಗೆ ರಜೆ ಬಂ ತೆಂ ದ ರೆ ಶಾಲೆಗೆ ಹೋಗುವ ಮಕ್ಕಳ ತಂದೆ ತಾಯಿಗಳಿಗೆ ತಲೆನೋವು. ಮಕ್ಕಳ ಬಿಡುವಿನ ವೇಳೆಯನ್ನು ಸರಿಯಾಗಿ ನಿಯಂತ್ರಿಸದಿದ್ದರೆ ಆಗ ಬಹುದಾದ ಅನಾಹುತ ಕಂಡು ಗಾಭರಿ. ವರ್ಷವಿಡೀ ಪಾಠ ಓದಲು ಒತ್ತಾಯಿಸುವ ತಂದೆ ತಾಯಿಗಳು ಬೇಸಿಗೆಯ ರಜೆಯಲ್ಲಿ ಮಕ್ಕಳನ್ನು ಉಪಯುಕ್ತ ರೀತಿಯಲ್ಲಿ ನೋಡಿಕೊಳ್ಳದಿದ್ದರೆ ಮಕ್ಕಳ ಪ್ರತಿಭೆಯು ಮುರುಟುವುವುದಷ್ಟೇ ಅಲ್ಲ, ಮಕ್ಕಳ ಘಾತುಕ ಚಟುವಟಿಕೆಗಳಿಗೂ ಕಾರಣರಾಗಬೇಕಷ್ಟೆ. ಇತ್ತೀಚಿಗೆ ಇಂತಹ ಸಮಸ್ಯೆಯನ್ನು ನಿವಾರಿಸಲೆಂದೇ ಸರ್ಕಾರದ ವತಿಯಿಂದ, ಅನೇಕ ಸಂಘ ಸಂಸ್ಥೆಗಳ ವತಿಯಿಂದ ಬೇಸಿಗೆ ಶಿಬಿರಗಳು ನಡೆಯಲ್ಪಡುತ್ತವೆ, ಆದರೆ ಮಕ್ಕಳ ಮನೋವಿಕಾಸಕ್ಕಾಗಿ ಇಂತಹದೊಂದು ಯೋಜನೆಯನ್ನು ಸುಮಾರು ಐವತ್ತೈದು ವರ್ಷಗಳ ಹಿಂದೆಯೇ ರೂಪಿಸಲಾಗಿತ್ತು ಎಂದರೆ ಆಶ್ಚರ್ಯವಾಗುತ್ತದೆಯಾದರೂ ಇದು ಸತ್ಯ.

ನೂರು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಜನಿಸಿದ ಆರ್. ಕಲ್ಯಾಣಮ್ಮ ಮಹಿಳೆಯರು ಮತ್ತು ಮಕ್ಕಳಿಗಾಗಿ ಬಹಳ ದುಡಿದವರು. ಅವರು ಪ್ರಕಟಿಸುತ್ತಿದ್ದ "ಸರಸ್ವತಿ" ಮಾಸ ಪತ್ರಿಕೆಯಲ್ಲಿ ಮಕ್ಕಳಿಗೆಂದೇ ವಿಶೇಷವಾಗಿ ಕೆಲವು ಪುಟಗಳನ್ನು ಮೀಸಲಿಟ್ಟಿದ್ದರು, ಮಕ್ಕಳೆಂದರೆ ಕಲ್ಯಾಣಮ್ಮನವರಿಗೆ ವಿಶೇಷ ಪ್ರೀತಿ. ಈ ಮಕ್ಕಳ ಬಾವುಟದಲ್ಲಿ ಶಿಶು ಗೀತೆಗಳು, ಸಣ್ಣ ಸಣ್ಣ ನೀತಿ ಕಥೆಗಳು, ಜೊತೆಗೆ ದೇಶ ವಿದೇಶದ ಮಹನೀಯರ ಜೀ ವ ನ ಚಿತ್ರಗಳು ಮುಂತಾದವನ್ನು ಪ್ರಕಟಿಸುತ್ತಿದ್ದರು. ಮಕ್ಕಳ ಬಾವುಟಕ್ಕೆ ಮಕ್ಕಳನ್ನೇ ಸಂಪಾದಕರನ್ನಾಗಿಸಿ ಅವರಲ್ಲಿದ್ದ ಬಾಲಪ್ರತಿಭೆಯನ್ನು ಗುರುತಿಸಿ ಬೆಳೆಸಿದವರು ಕಲ್ಯಾಣಮ್ಮ. ಹೀಗೆ ಮಕ್ಕಳು ಮಾಡುವ ಕೆಲಸವನ್ನು ನೋಡಿ ಹಿಗ್ಗಿ ಆನಂದಪಡುತ ಮಹಾಮಾತೆಯಾದರು. ಈ ಮಕ್ಕಳ ಮೇಲಿನ ಪ್ರೀತಿಗೆ ಇನ್ನೂ ಹೆಚ್ಚಿನ ಕ್ರಿಯಾತ್ಮಕ ಸ್ವರೂಪ ಕೊಡಲು ಮನಸ್ಸು ಮಾಡಿದರು. ಮಕ್ಕಳ ಮನೋವಿಕಾಸಕ್ಕೆ ಮತ್ತು ಅವರಲ್ಲಿರುವ ಸಾಂಸ್ಕೃತಿಕ ಚಟುವಟಿಕೆಗಳು ಬೆಳೆಯುವುದಕ್ಕೆ ಅನುಕೂಲವಾಗುವಂತಹ ಸಂಸ್ಥೆಯೊಂದನ್ನು ಆರಂಭಿಸುವ ಯೋಚನೆ ಅವರ ತಲೆ ಹೊಕ್ಕಿತು, ಯೋಚನೆ ಯೋಜನೆಯಾಗಿ ಮರುಕ್ಷಣವೇ ರೂಪುತಾಳಿತು. ಆದರ ಫಲವೇ ಮಕ್ಕಳ ಕೂಟದ ಉ ಗ ಮ. 1937ರಲ್ಲಿ ಉಗಮವಾದ ಈ ಪುಟ್ಟ ಸಂಸ್ಥೆ 1938ರಲ್ಲಿ "ಅಖಿಲ ಕರ್ನಾಟಕ ಮ ಕ್ಕ ಳ ಕೂಟ"ವೆಂಬ ಖ್ಯಾತಿಯನ್ನೂ, ವ್ಯಾಪ್ತಿಯನ್ನೂ ಪಡೆಯಿತು.

ಮೊದಲಿಗೆ ಚಾಮರಾಜಪೇಟೆ ಮೂರನೆಯ ರಸ್ತೆಯಲ್ಲಿ ಶಿವಗಂಗ ಮಠದ ಪಕ್ಕದಲ್ಲಿ ಶ್ರೀಮತಿ ಲಕ್ಷಮ್ಮ ಎಂಬುವವರು ವಾಸಿಸುತ್ತಿದ್ದ ಒಂದು ಚಿಕ್ಕ ಮನೆಯಲ್ಲಿ ಮಕ್ಕಳ ಕೂಟದ ಚಟುವಟಿಕೆಗಳು ಆರಂಭವಾಯಿತು. ಮಕ್ಕಳಿಲ್ಲದ ಈ ಮಹಿಳೆ ತಮ್ಮ ಮನೆಯಲ್ಲಿ ಮಕ್ಕಳ ಕೂಟವನ್ನು ಸೇರಿಸಲು ಮುಂದೆ ಬಂದರು. ಈ ಮನೆಯು ಹಿಂದೆ ಕಿವುಡರ–ಮೂಗರ ಶಾಲೆಯಾಗಿತ್ತು, ಅನಂತರ ಮಕ್ಕಳ ಕೂಟದ ವಿಸ್ತರಣೆಗೆ ಒಂದು ಬಾರಿ ಯೋಜನೆಯನ್ನು ಹಾಕಿಕೊಳ್ಳಲಾಯಿತು. ಇದಕ್ಕನುಸಾರವಾಗಿ 1938ರ ಏಪ್ರಿಲ್ 26ರಂದು ದಿವಂಗತ ಜಯಚಾಮರಾಜೇಂದ್ರ ಒಡೆಯರ್ ಅವರ ಸಹೋದರಿ ಶ್ರೀಮತಿ ವಿಜಯಲಕ್ಷ್ಮಮ್ಮಣ್ಣಿಯವರಿಂದ ಮಕ್ಕಳ ಕೂಟದ ಆರಂಭೋತ್ಸವ ನೆರವೇರಿತು, ಅಂದಿನಿಂದ ಇಂದಿನವರೆಗೂ ಮಕ್ಕಳ ಕೂಟವು ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಾ ಬಂದಿದೆ.

ಮಕ್ಕಳ ಕಾರ್ಯಕಲಾಪ ಚಟುವಟಿಕೆಗಳಿಗೆ ತನ್ನದೇ ಆದ ಆಟದ ಮೈದಾನ, ಮಕ್ಕಳ ಕೂಟದ ಕಾರ್ಯ ವ್ಯವ

ಸ್ಥೆಗಾಗಿ ಕಚೇರಿ ಇವುಗಳನ್ನು ಗಳಿಸಲು ಕಲ್ಯಾಣಮ್ಮನವರಿಗೆ ಕಷ್ಟವಾಗಲಿಲ್ಲ. ಶಂಕರಯ್ಯ ಹಾಲಿನ ಪಕ್ಕದಲ್ಲಿ ಒಂದು ಪುಟ್ಟ ಕೊಠಡಿಯನ್ನು ಶಾಂಪೂರ್ ಗುರುಮೂರ್ತಿಯವರು ತಮ್ಮ ಸ್ವಂತ ಖರ್ಚಿನಿಂದ ಕಟ್ಟಿಸಿಕೊಟ್ಟರು. ಆಗ ಮಕ್ಕಳ ಕೂಟದ ಮಕ್ಕಳನ್ನು ಅಲ್ಲಿ ಸೇರಿಸಲು ಸಾಧ್ಯವಾಯಿತು. ನಂತರದ ದಿನಗಳಲ್ಲಿ ಕೋಟೆ ಹೈಸ್ಕೂಲಿನ ಬಳಿಯಿರುವ ದೊಡ್ಡ ಆಟದ ಮೈದಾನವಿರುವ ಜಾಗವನ್ನು ಕಲ್ಯಾಣಮ್ಮನವರು ದೊರಕಿಸಿಕೊಂಡರು.

ಅಖಿಲ ಕರ್ನಾಟಕ ಮಕ್ಕಳ ಕೂಟ ಪ್ರಾರಂಭವಾದಂದಿನಿಂದ ಮಕ್ಕಳ ಕೂಟದ ಕಾರ್ಯಕ್ರಮಗಳು, ಧ್ಯೇಯೋದ್ದೇಶಗಳು ಸರ್ವಜನಪ್ರಿಯವಾಯಿತು. ಸರ್ ಮಿರ್ಜಾ ಇಸ್ಮಾಯಿಲ್‌ರಂತಹ ಗಣ್ಯರಲ್ಲದೆ ಎಷ್ಟೋ ಜನ ಹಿರಿಯರು ಈ ಮಕ್ಕಳ ಕೂಟದ ಆಜೀವ ಸದಸ್ಯರಾದರು ಶ್ರೀಯುತ ದೊಡ್ಡವೀರಪ್ಪ, ಶಾಂಪೂರ್ ಗುರುಮೂರ್ತಿ ಡಿ. ಸಿ. ಸುಬ್ಬರಾಯಪ್ಪ, ಪಿ. ಶಿವಶಂಕರ್ ಮತ್ತು ಶ್ರೀಮತಿ ನಾಗೂಬಾಯಿ ಹಾಗೂ ಶ್ರೀಮತಿ ಪಿ.ಆರ್. ಜಯಲಕ್ಷಮ್ಮನವರುಗಳು ಮಕ್ಕಳ ಕೂಟದ ಅಸ್ಥಿಭಾರ ಭದ್ರವಾಗಿರುವಂತೆ ನೋಡಿಕೊಂಡರು. ಟಿ.ಎಂ.ಆರ್. ಸ್ವಾಮಿಯವರು ಮಕ್ಕಳ ಕೂಟದ ಸ್ಥಾಪನೆಯ ಕಾರ್ಯದಲ್ಲಿ ಎಲ್ಲಾ ರೀತಿಯಿಂದಲೂ ಕಲ್ಯಾಣಮ್ಮನವರಿಗೆ ನೆರವಾದರು.

ಮಕ್ಕಳ ಕೂಟದ ಯೋಜನೆಯು ವ್ಯವಸ್ಥಿತವಾಗಿ ನಡೆಯಲು ಒಂದು ರೂಪುರೇಷೆಯನ್ನು ರಚಿಸಲಾಯಿತು. ಪ್ರತಿ ವರ್ಷ ಬೇಸಿಗೆಯ ರಜದಲ್ಲಿ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಮಕ್ಕಳ ಸಮ್ಮೇಳನವನ್ನು ಏರ್ಪಡಿಸುವುದು ಆ ಸಮ್ಮೇಳನದಲ್ಲಿ ಮಕ್ಕಳೇ ಅಧ್ಯಕ್ಷರು, ಮಕ್ಕಳೇ ಸ್ವಾಗತಾಧ್ಯಕ್ಷರುಗಳಾಗುವಂತೆ ನಿರ್ಧರಿಸಲಾಯಿತು ಹೀಗೆ 1939ರ ಮಕ್ಕಳ ಕೂಟದ ಸಮ್ಮೇಳನದ ಮೊದಲ ಅಧ್ಯಕ್ಷರು ಶ್ರೀ ಶಾರದಾ ಪ್ರಸಾದ್‌ರವರು.

ಮಕ್ಕಳ ಉಪಯೋಗಕ್ಕಾಗಿ ಅವರ ಪುರೋಭಿವೃದ್ಧಿಗಾಗಿ ಬೇಕಾಗುವ ಠರಾವುಗಳನ್ನು ಚರ್ಚಿಸಿ ನಿರ್ಣಯಗಳನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟು ಅವುಗಳ ಉಪಯೋಗವನ್ನು ಪಡೆಯುತ್ತಿದ್ದು. ಮಕ್ಕಳ ಸಮ್ಮೇಳನಗಳಲ್ಲಿ ಮಂಡಿಸಿದ ಈ ರೀತಿಯ ಠರಾವುಗಳು ಪ್ರಯೋಜನಕಾರಿಯಾಗಿವೆ. ಇವುಗಳ ಪರಿಣಾಮವಾಗಿಯೇ ಇಂದು ಹಲವಾರು ಮಕ್ಕಳ ಪಾರ್ಕುಗಳು, ಮಕ್ಕಳ ರಂಗಮಂಟಪ ಪುಟಾಣಿ ರೈಲು. ಮಕ್ಕಳ ಕೈಗಾರಿಕೆಯ ವಸ್ತು ಪ್ರದರ್ಶನ ಮಕ್ಕಳ ಚಲನ ಚಿತ್ರ, ನಾಟಕ, ಇತ್ಯಾದಿಗಳು, ರಾಜ್ಯದ ನಾನಾ ಕಡೆ ರೂಪುಗೊಳ್ಳಲು ಕಾರಣವಾಗಿವೆ.

ಕರ್ನಾಟಕದಲ್ಲೆಲ್ಲಾ ಅಖಿಲ ಕರ್ನಾಟಕ ಮಕ್ಕಳ ಕೂಟದ ಅಂಗ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಮೈಸೂರು ಮಂಗಳೂರು, ಕೋಲಾರ, ಮಂಡ್ಯ, ಚಿಕ್ಕಮಗಳೂರು ಮುಂತಾದ ಜಿಲ್ಲಾ ಮುಖ್ಯ ಕೇಂದ್ರಗಳಲ್ಲದೆ ಚಿಕ್ಕ ಚಿಕ್ಕ ಊರುಗಳಲ್ಲೂ ಮಕ್ಕಳ ಕೂಟದ ಶಾಲೆಗಳು ಸ್ಥಾಪಿಸಲ್ಪಟ್ಟವು. ಮಕ್ಕಳ ಕೂಟ ಸ್ಥಾಪನೆಯಾದಾಗಿನಿಂದಲೂ ಅದಕ್ಕಾಗಿ ಬಹುವಾಗಿ ಶ್ರಮಿಸಿದ ಶ್ರೀ ಎಚ್. ಯೋಗಾನರಸಿಂಹ ಮತ್ತು ಶ್ರೀಮತಿ ಹೆಚ್.ವೈ. ಸರಸ್ವತಮ್ಮನವರು ಮೈಸೂರಿನಲ್ಲಿ ಮಕ್ಕಳ ಕೂಟದ ಸ್ಥಾಪನೆಗೆ ಕಾರಣಕರ್ತರಾದರು,

ಮಕ್ಕಳ ಕೂಟದ ಯಶಸ್ಸಿಗೆ ಕಲ್ಯಾಣಮ್ಮನವರ ನಿರಂತರ ದುಡಿಮೆಯೇ ಮುಖ್ಯ ಕಾರಣ. ಅವರ ಕನಸಿನ ಸಾಕಾರ ಮೂರ್ತಿಯಾದ ಈ ಅಖಿಲ ಕರ್ನಾಟಕ ಮಕ್ಕಳ ಕೂಟ ಇಂದಿಗೂ ಸಕ್ರಿಯವಾಗಿ ಮಕ್ಕಳ ಏಳಿಗೆಗಾಗಿ ದುಡಿಯುತ್ತಿದೆ.



# "ಸರಸ್ವತಿ" ಯಲ್ಲಿನ ಒಂದು ಸಂಪಾದಕೀಯ

( ಸಂಪುಟ 29, ನವೆಂಬರ್ 1949, ಸಂಚಿಕೆ 1 )

"ಸರಸ್ವತಿಯು" ತನ್ನ ರಜತ ಮಹೋತ್ಸವದ ಕಿರಣಾವಳಿಯನ್ನು, ಅಂಧಕಾರವಾಗಿ ಆವರಿಸಿದ ಎಡರು ತೊಡರುಗಳಲ್ಲಿ ಬೆಳಗಿಯೇ ಬೆಳಗಿದಳು. ಮುಂದಿನ ಪುಷ್ಯ ಮಾಸದಲ್ಲಿ ೨೯ನೆಯ ವರ್ಷದ ಮೊದಲನೆಯ ಸಂಚಿಕೆಯ ಕಿರಣದಿಂದ ವಿಶ್ವವನ್ನು ಬೆಳಗುತ್ತಾಳೆ. ಆಕೆಗೆ ಬೆಂಬಲ ಹೆಚ್ಚಿಗೆ ನೀಡಬೇಕು. ಚಂದಾದಾರರು ಹೆಚ್ಚಬೇಕು, ಆಕೆಯ ಬೆಳಕನ್ನು ಹೆಚ್ಚು ಜನ ಉಪಯೋಗಿಸಿಕೊಳ್ಳಬೇಕು "ಸರಸ್ವತಿ"ಯು ಕೇವಲ ಬೇಸರ ಕಳೆಯಲು ಕಥೆಗಳೆಂಬ ಕಂತೆಗಳ ಬಳಗವುಳ್ಳವಳಲ್ಲ. ಆಕೆ ದೇಶದ ಸ್ತ್ರೀಯರು. ಧರ್ಮ, ನೀತಿ, ನಡತೆ. ಪ್ರಗತಿ. ಶೀಲಾದಿಸದ್ಗುಣ ಸ್ವಭಾವದಿಂದ ಮಾತೃತ್ವದ ಸಿಂಹಾಸನಸ್ಥೆಯರಾಗಿ. ದೇಶೋದ್ಧಾರಕಿಯರಾಗಿ, "ಮಾತೃ ದೇವೋಭವ" ಎಂದು ಜಗತ್ತು ಅವರಿಗೆರಗಿ, ತನ್ನ ಜನನಿಯಂತೆ ಧರ್ಮದ ಉದ್ಧಾರಕ್ಕೆ ಕಂಕಣ ತೊಡುವ ಜನಾಂಗವನ್ನು ಸೃಷ್ಟಿಸಲು ಅತ್ಯಾವಶ್ಯಕವಾದ ವಿದ್ಯಾನಿಧಿಯನ್ನೇ ಒದಗಿಸುವವಳು ಇದಕ್ಕೇ, ಈ ವಿಷಯದಲ್ಲಿ ಅಭಿರುಚಿಯಿಲ್ಲದ ಇಂದಿನ "ನಾಗರಿಕ" ಪ್ರಪಂಚವು ಆಕೆಗೆ ಕಿವಿಗೊಡದಿರುವುದು, ಆದರೆ ಪುತ್ರರು ದ್ವೇಷಿಸಿದರೆ ತಾಯಿಯು ಎಂದಾದರೂ ದ್ವೇಷಿಸುವವಳೇ । ಇಂದಲ್ಲ ನಾಳೆ ಮಕ್ಕಳು ಸರಿಹೋಗುವರೆಂಬ ಭರವಸೆ ಅವಳಿಗಿದ್ದೇ ಇದೆ.

ದೇಶದ ಸ್ವಾತಂತ್ರ್ಯದೊಡನೆಯೇ ಬಂದ ಹಾಲಹಲ ವಿಷವನ್ನುಂಡ ಮಹಾತ್ಮನು ದೇಶೋದ್ಧಾರಕ್ಕೆ ತನ್ನ ಪರವಾಗಿ ಅಮೂಲ್ಯವಾದ ರತ್ನಗಳನ್ನಿಟ್ಟು ಹೋಗಿದ್ದಾನೆ. ತ್ರೇತಾಯುಗದಲ್ಲಿ ನಿರಂಕುಶರಾಗಿ ಮಹಾಂಧರಾಗಿ ಮೆರೆದ ಕ್ಷತ್ರಿಯರನ್ನು ಅಡಗಿಸಿದ ಜಗದೋದ್ಧಾರಕನಾದ ಪರಶುರಾಮನು ಕಲಿಯುಗದಲ್ಲಿ "ಪಟೇಲ"ನಾಗಿ ಹುಟ್ಟಿ ಮತ್ತೆ ಮದಿಸಿದ ಕ್ಷತ್ರಿಯರ ಸ್ವೇಚ್ಛಾವರ್ತನೆಯಿಂದ ಒಡೆದು ಹೋಗಬೇಕಾಗಿದ್ದ ದೇಶವನ್ನು ಒಂದುಗೂಡಿಸಿ, ಪಾರು ಮಾಡಿ, ಅವರನ್ನು ಸಾಂಕುಶರಾಗಿ ಮಾಡಿದನು. ಆತನ ಎಪ್ಪತ್ತನಾಲ್ಕನೆಯ ಜನ್ಮದಿನೋತ್ಸವದಲ್ಲಿ ಆತನಿಗೆ "ಶ್ರೀ ಸರಸ್ವತಿ"ಯು ಆಯುರಾರೋಗ್ಯೈಶ್ವರ್ಯಾದಿ ಸಕಲಾಶೀರ್ವಾದಗಳನ್ನೂ ಕರುಣಿಸಿ ದೇಶವನ್ನು ಇನ್ನೂ ಹೆಚ್ಚಿನ ಪ್ರಗತಿಗೆ ತರಲು ಸರ್ವ ಶಕ್ತಿಯನ್ನು ಕರುಣಿಸಲಿ.

ಆತನ ವಾಣಿಯ ಕಥೆ "ಕೇವಲ ಕ್ರಾಂತಿ" ಹುರುಳಿಲ್ಲದ ಆಕ್ಷೇಪಣೆಗಳಿಂದಲೇ ಎದಿರುಬೀಳುವ ಜನ ಕೇಳಬೇಕು. ಅಮೇರಿಕದಂತಹ ಬಂಡವಾಳದ ಮುಂದೆ ಮೂರು ಮತ್ತೊಂದು ಜನ ಸ್ವದೇಶಿಯರು "ಸೂರ್ಯನ ಮುಂದಿನ ಮಿಂಚು ಹುಳುಗಳಂತೆ" ಅವರನ್ನು ಹಿಂಡಿದರೆ, "ಹಸುವಿನ ಕೆಚ್ಚಲಿನ ರಕ್ತವನ್ನೂ ಕೂಡ ಬಿಡದೆ ಸೆಳೆದಂತೆ" ಬಂಡವಾಳಗಾರರಿಂದ, ಅವರ ಬೆನ್ನು ಚಪ್ಪರಿಸಿ ದೇಶದ ಸೌಖ್ಯವನ್ನು ಸಾಧಿಸಬೇಕಾದುದೇ ಧರ್ಮ. ಅವರು ನಿರಂಕುಶರೂ, ನಿರ್ದಯರೂ, ಸ್ವಾರ್ಥಿಗಳೂ ಆದರೆ ಮಾತ್ರ ಅವರನ್ನು ದಾರಿಗೆ ತರಬಹುದು. ಇದು ಪಟೇಲರಂತಹವರಿಗೆ ಸಾಧ್ಯವಲ್ಲದ್ದಲ್ಲ. ಆದರೆ ಕೇವಲ ಸ್ವಾರ್ಥ ಸಾಧನೆಗೋ ಅಥವಾ ಆಕ್ಷೇಪಣೆಯೇ ದೊಡ್ಡ ಕರ್ತವ್ಯವೆಂಬ ಭಾವನೆಯಿಂದಲೋ ಕೂಗುವುದು ಬರಿ ಭ್ರಾಂತಿ! ಅವರಿಗೆ ಎಲ್ಲ ಬಗೆಯ ಸಹಕಾರ ನೀಡಬೇಕು. ಸರ್ಕಾರವೇ ಎಲ್ಲವನ್ನೂ ವಹಿಸಿಕೊಂಡರೆ, ಜನಕ್ಕೆ ಮತ್ತೂ ದುರಾಶೆಯೇ ಹೆಚ್ಚುವುದೇ ವಿನಹ "ಇದು ನಮ್ಮ ದೇಶ—ನನ್ನ ಸರ್ಕಾರ—ನನ್ನ ಜನಕ್ಕೆ ನನ್ನದಿದೇ ಸೇವೆ ಇದನ್ನು ಆತ್ಮಸಾಕ್ಷಿಯಾಗಿ ಸತ್ಯತೆಯಿಂದ ನಡೆಸುತ್ತೇನೆ. ಇದಕ್ಕಾಗಿ ಸರ್ವತ್ಯಾಗವನ್ನೂ ಮಾಡುತ್ತೇನೆ" ಎಂಬ ಮನೋಭಾವವಿರುತ್ತದೆಯೋ ಎಂದು ಪ್ರಶ್ನಿಸಲೇಬೇಕು. ೧೫೦ ವರ್ಷಗಳ ಕ್ರಾಂತಿ, ಹೋರಾಟದ ಕ್ರಾಂತಿ-ಭ್ರಾಂತಿ ಇನ್ನೂ ಅಡಗಿಲ್ಲದ ನಮ್ಮ ಜನಕ್ಕೆ ಇದರ ಪರಿಚಯ ಮಾಡಿಕೊಡಬೇಕಾದುದೇ ಎಲ್ಲ ದೇಶದ ಪಕ್ಷಗಳ ಕರ್ತವ್ಯ. ಪಕ್ಷಪಕ್ಷಗಳು ಪರಸ್ಪರ ಹುಚ್ಚು ಹುಚ್ಚಾಗಿ, ಕೇವಲ ಪಕ್ಷಪಾತ ದೃಷ್ಟಿಯಿಂದ, ಗೂಂಡಾ ವರ್ತನೆಯಿಂದ ಇದಿರಿಸುತ್ತಿದ್ದರೆ ದೇಶದ ಒಳ ಶಾಂತಿಗೆ ಧಕ್ಕೆ ಖಂಡಿತ ! ಭಿನ್ನಾಭಿಪ್ರಾಯಗಳನ್ನು ತಿದ್ದಲು ಪರಸ್ಪರ ಮಿಲನ—ಸಂಭಾಷಣೆಗಳಿಂದ ಸಾಧ್ಯವೇ ವಿನಹ ಹೃದಯ ಹೃದಯಗಳನ್ನೇಕೀಕರಿಸದೆ ವಿರುದ್ಧ ಪ್ರದರ್ಶನಗಳಿಂದ ದ್ವೇಷ ಹೆಚ್ಚಿ ದೇಶವು ನಾಶ

ವಾದೀತು. ಗಾಂಭೀರ್ಯವಿಲ್ಲದ ಗೂಂಡಾ ವರ್ತನೆ ದೇಶ ಕೊಳ್ಳೆಯದಲ್ಲ, ಪಕ್ಷಗಳ ಗೌರವ, ಕೀರ್ತಿ, ಘನತೆ-ಮರ್ಯಾದೆಗಳಿಗೆ ಅವಮಾನಕಾರಿಯಾದುದು, ಪಿತಾಮಹರಂತಿರುವ ಪಟೇಲರ ಕಡೆ ಮಾನಕೊಟ್ಟು ಸಹಕರಿಸಬೇಕು, ಇದೇ ಉಚ್ಚ ಸಂಸ್ಕೃತಿಯ ಲಕ್ಷಣ.

ಮತ್ತೊಬ್ಬ ಮಹಾ ನಾಯಕ ಸ್ಥಾನ ಮಾನಗಳಿಲ್ಲದೆ ಕೇವಲ ಬಿಕ್ಷುಕನಾಗಿ ದೇಶದ ಕೀರ್ತಿಯನ್ನು ಹಿಡಿದೆತ್ತಿ ವಿಶ್ವವೇ ಸ್ವದೇಶಕ್ಕೆ ತಲೆಬಾಗುವಂತೆ ಮಾಡಿದ ಮಹಾ ಪುರುಷ ಶ್ರೀ ಸ್ವಾಮಿ ವಿವೇಕಾನಂದರ ಅವತಾರದಂತೆ ಮುಖ್ಯ ಮಂತ್ರಿ ಸ್ಥಾನದಲ್ಲಿದ್ದು ತಾಯ್ನಾಡ ಕಡೆಗೇ ಯುದ್ಧಪ್ರೀಯರಾದ ವಿಶ್ವದ ಇತರ ಜನಾಂಗಗಳು ತಮ್ಮ ನಾಗರೀಕತೆಗೆ ನಾಚಿ ತಲೆಬಾಗುವಂತೆ ಮಾಡಿ ಮಹಾತ್ಮನ ಶಾಂತಿ ಸಂದೇಶ ಸಾರಿದ "ಪಂಡಿತ ಜವಾಹಿರ್‌ಲಾಲ್ ನೆಹ್ರೂ" ಇವರ ಜನ್ಮದಿನೋತ್ಸವವೂ ಇದೇ ಮಾಸದಲ್ಲಿ ಬಂದಿದೆ, ! ಇದು ನಮ್ಮ ಭಾಗ್ಯ! "ಸರಸ್ವತಿ" ಯ ಸಕಲಾಶೀರ್ವಾದಗಳೂ ಆತನಿಗಿದೆ, ಆತ ಚಿರಾಯುವಾಗಿ ಬಾಳಲಿ ! ದೇಶದ ಸ್ವಾತಂತ್ರ್ಯದಡಿಗಲ್ಲಿನಮೇಲೆ ಭವ್ಯ ನೆಲೆ ನಿಲ್ಲಿಸಲಿ ! ಮಾತೆ ತನ್ನೌನ್ನತ್ಯ ಶಿಖರದಿಂದ ಶಾಂತಿ ಸತ್ಯ ಅಹಿಂಸೆಯಿಂದ ಜಗತ್ತನ್ನಾಳಲಿ !

> ವಿಶ್ವದ ಆರ್ಥಿಕ ಮುಗ್ಗಟ್ಟು ಹೆಚ್ಚಿದುದು ಡಾಲರ್ ಬೆಲೆಯು ಇಳಿತಾಯದಿಂದ. ಇದು ವಿಶ್ವಪ್ರೇಮಿಯಾದ ಭಾರತಕ್ಕೂ ಭಾಗವಾಗಿ ಬಂದ ದೌರ್ಭಾಗ್ಯ ! ಪಾಕೀಸ್ಥಾನದ ತೀರ್ಮಾನ ವ್ಯತ್ಯಕ್ತವಾಗಿರುವುದು. ಬೇರೆ ದೇಶದ ವ್ಯಾಪಾರೋದ್ಯಮಕ್ಕೆ ಕಂಟಕವಾಗಿದೆ. ಇನ್ನಾದರೂ ಬಂಡವಾಳಗಾರರು ದೇಶಪ್ರೇಮದಿಂದ ಮುಂದೆ ಬಂದು ದೇಶ ಬಾಂಧವರ ಬಡತನಕ್ಕೆ ಭಾಗಿಗಳಾಗಬೇಕು!

ಈ ಮಾಸವು ಬಲು ಶುಭವಾದ ಮಾಸ, ಈ ರಾಷ್ಟ್ರದ ಮಹಾನಾಯಕರಿಬ್ಬರ ವರ್ಧಂತ್ಯುತ್ಸವವೇ ಅಲ್ಲದ ಧರ್ಮೋದ್ಧಾರಕರಾದ "ಶ್ರೀ ಸದ್ಗುರು ನಾನಕರ ಜನ್ಮದಿನೋತ್ಸವವು ಈ ಮಾಸದಲ್ಲೇ ಬಂದಿದೆ. ಇಂತಹ ಮಹಾ ಗುರು ಕೇವಲ "ಸಿಖ್" ಮತಕ್ಕೆ ಮಾತ್ರ ಹುಟ್ಟಲಿಲ್ಲ. ಯಾವ ಮಹಾ ಪುರುಷನೂ ಕೇವಲ ಸಂಕುಚಿತ ದೃಷ್ಟಿಯುಳ್ಳವನಾಗಿರುವುದು ಸಾಧ್ಯವಿಲ್ಲ. ಹಾಗಾದರೆ ಜಗದ ಜೀವಿಗಳಲ್ಲಿ ಏಕಮೇವಾದ್ವಿತೀಯಾತ್ಮತೆಯನ್ನು ತೋರುವ ಧರ್ಮ ಸಂಸ್ಥಾಪಕನಾಗಲಾರ. ಮಹಾತ್ಮರು ಪೂರ್ಣ ವಿಶ್ವಕ್ಕೆ ಮಹಾತ್ಮರು, ಅವರ ಹಿಂಬಾಲಕರು ಕೆಲವರಿರಬಹುದು. ಅವರ ಗುರು ಅವರ ಹಕ್ಕೆಂದರೆ ಅದು ಮದಾಂಧತೆಯಲ್ಲದೆ ಬೇರಿಲ್ಲ. ಮಹಾತ್ಮರು ಮತ ಬೆಳೆಸಲಿಲ್ಲ, ಧರ್ಮೋದ್ಧಾರಕ್ಕೆ ಬಂದಾರು. ಶ್ರೀ ನಾನಕರ ವಚನ ವೇದವಾಕ್ಯ-ಲೋಕಮಾನ್ಯ ಪೂಜ್ಯಾ ಜ್ಞಾನ. ಇಂದು ಸಿಖ್ಖರು ಮುಸಲ್ಮಾನರಂತೆ ದೇಶ ಒಡೆಯಲು "ಸಿಖ್ ಸ್ಥಾನ" ಬೇಕೆನ್ನುತ್ತಿರುವುದು ಗುರುನಾನಕರ ಗುರು ಪರಂಪರೆಯಲ್ಲಿ ಬಂದವರಲ್ಲಿ ನಾಚಿಕೆಗೇಡು ! ಸಿಖ್ಖರೂ ಹಿಂದೂಸ್ಥಾನದವರೇ ! ಅವರು ಸ್ವದೇಶ ಭಕ್ತಿಯಿಂದ ಅಖಂಡ ಭಾರತ ಸ್ಥಾಪನೆಗೆ ನೆರವಾಗಬೇಕು. ಗುರುನಾನಕರು ದೇಶೀಯರಿಗೆ ಸ್ವಚ್ಛ ಧರ್ಮ ಬುದ್ಧಿಯನ್ನು ಕರುಣಿಸಿ ವಿಶ್ವದಲ್ಲಿ ಬೆಳಗಿಸಲೆಂದು ಸರಸ್ವತಿಯು ಗುರುವರ್ಯರಿಗೆ ನಮಿಸಿ ಪ್ರಾರ್ಥಿಸುವಳು.

"ಭಾಷಾವಾರು ಪ್ರಾಂತಗಳ ತಿಕ್ಕಾಟ, ರಕ್ತಪಾತಕ್ಕೆಡೆಗೊಡುವುದಾದರೆ ಆ ವಿಭಜನೆಯೇ ಬೇಡ" ಎಂದು ಗಣ್ಯರೊಬ್ಬರು ಹೇಳಿದುದು ಮಾನ್ಯ, ಮನನೀಯ ವಿಚಾರ. ಮೈಸೂರು ಕರ್ನಾಟಕ ಪ್ರಾಂತ ರಚನೆಯ ವಿಚಾರ ಗೊಂದಲದಲ್ಲಿ ಸಭೆಗಳಲ್ಲಿ ನಗೆಗೀಡಾಯಿತು ! ಪರಶುರಾಮನು ಹೇಗೆ ಜನಕ, ದಶರಥಾಧಿ ಮಹಾ ಮಹಾ ರಾಜರ್ಷಿಗಳ ಸಿಂಹಾಸನಸ್ಥರಾದವರನ್ನೇ ಉಳಿಸಿದ್ದನೋ ಅಂತೇ ಮೈಸೂರು ಮಹಾರಾಜರ ಸಿಂಹಾಸನಕ್ಕೂ ಶ್ರೀ ಪಟೇಲರು ಮನ್ನಣೆ ಕೊಟ್ಟಿರುವುದರ ಕಾರಣ ಅಲ್ಲಿರುವ "ರಾಮರಾಜ್ಯ"ದ ರೂಪು ರೇಖೆಯ ವೈಭವಕ್ಕಾಗಿ, ಆದರೂ ಅಧಿಕಾರ ವರ್ಗದ ಸ್ವಾರ್ಥ ಸಾಧನೆ ಜಾತಿ ವೈಷಮ್ಯ ಆಲಸ್ಯ ಮನೋಭಾವದಿಂದ ಪ್ರಭುಗಳ ದಿವಳ ಕೀರ್ತಿಗೆ ಕಳಂಕವುಂಟಾಗುತ್ತಲಿದೆ. ಅಧಿಕಾರಿಗಳು ರಾಜ ಸಿಂಹಾಸನದ ಗೌರವ, ಕೀರ್ತಿಗಳಿಗೆ ಕಳಂಕ ಉಂಟಾಗದಂತೆ ನೋಡಿಕೊಳ್ಳದಿದ್ದರೆ ಅವರೇ ಮೈಸೂರಿನ ನಾಶಕ್ಕೆ ದಾರಿ ತೋರಿದಂತಾಗುವುದು. ಅಖಂಡ ಕರ್ನಾಟಕಕ್ಕೆ ಮೈಸೂರು ಸಿಂಹಾಸನವೇ ಯೋಗ್ಯ. ಹಾಗೆಯೇ ಆಗಲಿ,

ಓಂ ಶಾಂತಿಃ-ಶಾಂತಿಃ-ಶಾಂತಿಃ

## ನಮ್ಮ ನುಡಿಗನ್ನಡಿ

('ಸರಸ್ವತಿ'ಯ ಟೀಕೆ, ಟಿಪ್ಪಣಿ)

**ದೇಶಭಕ್ತರ ದರ್ಶನ:** ಜುಲೈ ತಿಂಗಳ ಮೊದಲನೆಯ ಭಾಗದಲ್ಲಿ ನಮ್ಮೀ ನಗರವು ಅತ್ಯಪೂರ್ವ ಆನಂದೋತ್ಸವಕ್ಕೆ ಅವಕಾಶ ಕೊಟ್ಟಿತು. ತಾ। ೭ಕ್ಕೆ "ಕರ್ನಾಟಕ ಕೇಸರಿ" ದೇಶಪಾಂಡೆಯವರೂ, "ದೇಶಮಾನ್ಯ" ಸಿ. ರಾಜಗೋಪಾಲಚಾರ್ಯರೂ ಇಲ್ಲಿಗೆ ದಯೆಗೈದರು, ಮತ್ತು "ಬೆಂಗಳೂರ ಭೀಷ್ಮ" ಕರ್ಪೂರ ಶ್ರೀನಿವಾಸ ರಾಯರ ಅಧ್ಯಕ್ಷತೆಯಲ್ಲಿ ಕೋಟೆಯಲ್ಲಿ ಒಂದು ದೊಡ್ಡ ಖಾದಿ ವಸ್ತ್ರಾಲಯವನ್ನು ಸ್ಥಾಪಿಸಿದರು. ಇದರಿಂದ ಬೆಂಗಳೂರಿನಂಥ ದೊಡ್ಡ ಪಟ್ಟಣದ ಒಂದು ಅತ್ಯಾವಶ್ಯಕತೆಯು ಪೂರ್ಣವಾಯಿತೆಂದು ಸಂತೋಷಪಡುತ್ತೇವೆ. ತಾ॥ ೯ರ ದಿನ "ಶ್ರೀ ರಾಮೇಶ್ವರ ತಾರಾ ಸದನ"ದಲ್ಲಿ ಹಿಂದೀ ಪರೀಕ್ಷಾ ಪ್ರಮಾಣ ಪತ್ರ ವಿತರಣೋತ್ಸವವು ಅವರಿಬ್ಬರ ಅಭಿಮುಖದಲ್ಲಿ ಜರುಗಿತು. ಸಭಾಧ್ಯಕ್ಷರು ಸರ್ ಕೆ.ಪಿ. ಪುಟ್ಟಣ್ಣ ಶೆಟ್ಟರಿದ್ದು ಹಿಂದೀ ಸಭೆಯು ಬಹಳ ಮಹತ್ವಗೊಂಡಿತು. ಇದಾದ ಮರುದಿನ ಅವರನ್ನು ನಮ್ಮ ಶಾರದಾ ಸ್ತ್ರೀ ಸಮಾಜಕ್ಕೆ ಕರೆಸಿದ್ದೆವು. ಶ್ರೀಮಾನ್ ಆಚಾರ್ಯರು ಮಾತ್ರ ಸಮಾಜವನ್ನು ಸಂದರ್ಶಿಸಿ ಅಲ್ಲಿನ ಕಾರ್ಯಕಲಾಪಗಳನ್ನು ಸ್ಥಿತಿಗತಿಗಳನ್ನು ಅರಿತುಕೊಂಡರು. ಕೊನೆಗೆ ನಮ್ಮೆಲ್ಲರ ಅರಿಕೆಯಂತೆ "ಸ್ವಾತಂತ್ರ್ಯ ಸಂಗ್ರಾಮ"ದಲ್ಲಿ ಸ್ತ್ರೀಯರ ಸ್ಥಾನವನ್ನು ಕುರಿತು ಚಿಕ್ಕದೊಂದು ಭಾಷಣ ಮಾಡಿದರು.

**ರಾಜಕುಮಾರಿಯ ವಿವಾಹ :** ದಿವಂಗತ ದಿವಾನ್ ಸರದಾರ್ ಕಾಂತರಾಜೇ ಅರಸ್‌ಯವರ ಮತ್ತು ಶ್ರೀ ಮನ್ಮಹಾರಾಜರವರ ಸಹೋದರಿಯವರ ಸುಪುತ್ರಿಯರಾದ ಸೌ॥ ಲೀಲಾವತಿದೇವಿಯವರ ಶುಭ ವಿವಾಹವು ಕೃಷ್ಣರಾಜಪುರದ ಮುನಸೀಫರಾದ ಶ್ರೀಯುತ ಎಂ. ಬಸವರಾಜೇ ಅರಸ್ ಬಿ.ಎ., ಬಿ.ಎಲ್. ರವರೊಡನೆ ಮೈಸೂರು ರಾಜ ಭವನದಲ್ಲಿ ವಿಶೇಷ ವಿಜೃಂಭಣೆಯಿಂದ ಜರುಗಿತು. ಈ ಸತ್ ಸಂದರ್ಭದಲ್ಲಿ ಸಂಸ್ಥಾನದ ಪ್ರಮುಖ ಉದ್ಯೋಗಸ್ಥರೂ ಇತರ ಸಭ್ಯರೂ ವಿವಾಹಕ್ಕೆ ಆಮಂತ್ರಿಸಲ್ಪಟ್ಟಿದ್ದರು. ವಧೂವರರ ಸುಶೀಲ ಸ್ನೇಹ ಸಂಪನ್ನತೆಯು ದಿನೇ ದಿನೇ ವೃದ್ಧಿಯಾಗಿ ಈ ರಾಜ ದಂಪತಿಗಳು ಚಿರಕಾಲ ಚಿರಸುಖದಿಂದಿರಲೆಂದು ನಾವು ಸರ್ವಶಕ್ತ ಪರಮಾತ್ಮನಲ್ಲಿ ಪ್ರಾರ್ಥಿಸಿಕೊಳ್ಳುತ್ತೇವೆ.

**ವನಿತೆಯರೂ ವಾಚನಾಭಿರುಚಿಯೂ**

ನಮ್ಮ ಅನೇಕ ಅಕ್ಕ ತಂಗಿಯರಿಗೆ ವಾಚನಾಭಿರುಚಿಯೇನೋ ಇದೆ. ಅದು ಪೂರ್ಣವಾಗುವುದಿಲ್ಲ. ಸಾಹಿತ್ಯ ಸಮಾಜವು ಅವರಿಗೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿಕೊಡಲಿಲ್ಲ. ಹಿಂದೀ ಭಾಷೆಯ ಪ್ರಸಿದ್ಧ ಮಾಸಿಕ 'ಛಾಂದ್' (ಅಲಹಾಬಾದ್) ಎಂಬ ಸ್ತ್ರೀ ಸಾಹಿತ್ಯಮಯ ಪತ್ರಿಕೆಯ ನೂರಾರು ಸಂಚಿಕೆಗಳು ವರ್ಷಂಪ್ರತಿ ಧರ್ಮಾರ್ಥ ಹಂಚಲ್ಪಡುತ್ತವೆ, ಅದು ಅಲ್ಲಿನ ಮಹಿಳೆಯರಲ್ಲಿ ವಾಚನ ಲೇಖನಾಭಿರುಚಿಯು ಹೆಚ್ಚಿದೆ. ಕನ್ನಡ ಸಾಹಿತ್ಯದಲ್ಲಿ ಅಂತಹ ಏರ್ಪಾಡು ಎಂದಾಗಬಹುದೊ ತಿಳಿಯದು ನಮ್ಮಲ್ಲಿ ವಾಚನಾಭಿರುಚಿಯಿದ್ದರಲ್ಲವೇ ಆ ಏರ್ಪಾಡು?" ಎಂದು ಅನೇಕರು ಹೇಳುವರು ಉಡುಪಿಯ ಒಬ್ಬ ಭಗಿನಿಯ-ಈ ಪತ್ರವನ್ನು ನೋಡಿರಿ.

ಅಮ್ಮಾ, ನಾನೊಬ್ಬ ಬಡ ಹಿಂದೂ ತರುಣಿಯು. ಪುಸ್ತಕಗಳನ್ನೋದುದೆಂದರೆ ನನಗೆ ಬಹಳ ಇಷ್ಟ, ಆದರೆ ನನ್ನ ದುರ್ಭಾಗ್ಯದಲ್ಲಿ ಅಂತಹ ಸಂದರ್ಭಗಳು ಸಿಕ್ಕುವುದಿಲ್ಲ. ಯಾಕೆಂದರೆ ನನ್ನ ಪತಿಗಂತೂ ಓದುವ ಅಭಿರುಚಿಯೇ ಇಲ್ಲ. ಅಲ್ಲಿ ಅವರಿಂದ ನನಗೆ ಪುಸ್ತಕಗಳನ್ನು ದೊರಕಿಸುದೆಂದರೆ ತೀರ ಅಸಾಧ್ಯ. ಯಾಕೆಂದರೆ ಓದುವುದು (ಅದರಲ್ಲಿಯೂ ಸ್ತ್ರೀಯರು ಓದುವುದು) ಅವರಿಗೆ ಅಸಹನೀಯವೆಂದು ಕಂಡು ಬರುವುದರಿಂದ ಆ ಮಟ್ಟಿಗೆ ಅವರು ನನ್ನನ್ನು ತಿರಸ್ಕರಿಸುತ್ತಾರೆ. ಆದರೆ ನನ್ನ ಪತಿಯವರನ್ನು ಓದುವ ವಿಷಯದಲ್ಲಿ ಪ್ರೋತ್ಸಾಹ ಕೊಟ್ಟು ಸಂಸಾರವನ್ನು

ಉಚಿತ ರೀತಿಯಿಂದ ನಡೆಸಬೇಕಾಗಿಯೂ, ಓದುಗಾರಿಕೆಯಿಂದ ಉಂಟಾಗುವ ಪ್ರಯೋಜನಗಳನ್ನು ಅವರಿಗೆ ತಿಳಿಸಬೇಕಾಗಿಯೂ ನನ್ನ ಸದಿಚ್ಛೆಯಿರುವುದರಿಂದ ನಿಮಗೀ ಪತ್ರವನ್ನು ಬರೆದು ನಿಮ್ಮಿಂದ ಸಹಾಯ ಪಡೆದುಕೊಳ್ಳಬೇಕೆಂದು ಆಗಾಗ್ಗೆ ಯೋಚಿಸಿ ಈ ದಿವಸ ಧೈರ್ಯದಿಂದೀ ಪತ್ರ ಬರೆದಿರುವೆನು. ನೀವು ಬಡವಳಾದ ನನಗೆ ನಿಮ್ಮ 'ಸರಸ್ವತಿ' ಪತ್ರಿಕೆಯನ್ನು ಉಚಿತವಾಗಿ ಕೊಟ್ಟು ನನಗೆ ನೆರವಾಗಬೇಕೆಂದು ಬೇಡಿಕೊಳ್ಳುತ್ತೇನೆ. ಹಳ್ಳಿಯಲ್ಲಿ ಚಿಲ್ಲರೆ ವ್ಯಾಪಾರ ಮಾಡಿಕೊಂಡು ಇರುವ ನನ್ನ ಪತಿಗಂತೂ ಬಡಸ್ಥಿತಿಯ ದೆಸೆಯಿಂದಲೂ ಸ್ತ್ರೀಯರು ಓದಬಾರದೆಂಬ ಭಾವನೆಯಿಂದಲೂ ನಾನು ಉಭಯ ಸಂಕಟದಿಂದಲೂ ಸಂಕಟಪಡುತ್ತೇನೆ. ಐಶ್ವರ್ಯವಿದ್ದರೆ ನಾನೀ ಪುಸ್ತಕಗಳಿಗೆ ಹಾತೊರೆಯುತ್ತಿದ್ದಿಲ್ಲ. ಆದ್ದರಿಂದಲೇ ಬಡವಳಾದ ನನಗೆ ತಮ್ಮ ಮಾಸಪತ್ರಿಕೆಯನ್ನು ಉಚಿತವಾಗಿ ಕೊಡಬೇಕೆಂದು ಬೇಡುವೆನು. ಸ್ತ್ರೀಯರಿಗೆ ಹಲವು ವಿಧಗಳಿಂದ ಉಪಕಾರ ಬಯಸುವ ನೀವು ನನಗೀರೀತಿ ಸಹಾಯಮಾಡಿರಿ. ನಿಮ್ಮ ಋಣವನ್ನು ಎಂದಾದರೂ ಸಲ್ಲಿಸದೆ ನಿಲ್ಲಂವುದಿಲ್ಲ. 'ಇತಿ ತಮ್ಮ ಭಗಿನಿ'.

ಇದರಿಂದ ಮಹಿಳಾ ಜನಾಂಗವು ಯಾವ ಸ್ಥಿತಿಯಲ್ಲಿದೆಂಬುದೂ, ಅವಳ ಬುದ್ಧಿವಿಕಾಸತೆಗೆ ಪುರುಷರು ಎಷ್ಟರಮಟ್ಟಿಗೆ ಸಹಾಯ ಮಾಡುವರೆನ್ನುವುದೂ ವಿಶದವಾಗುವುದು. ನಮ್ಮ ಅಲ್ಪಸೇವೆಯನ್ನು ಸ್ವೀಕರಿಸಲು ಈ ನಮ್ಮ ಸೋದರಿಯು ಮುಂದುವರಿದುದು ಸಂತೋಷದ ಸುದ್ದಿಯು. O

---

# ನಿಮ್ಮಿಂದ. . . . .

ಪ್ರಿಯ ಅಚಲ.

ಸುಮಾರು ಐದು ವರ್ಷಗಳಿಂದ 'ಅಚಲ'ದ ಓದುಗಳಾಗಿರುವೆ. ಅದರಲ್ಲಿನ ಲೇಖನಗಳನ್ನೂ ಓದಿ ಸಂತೋಷಪಟ್ಟಿದ್ದೇನೆ, ಗಂಭೀರವಾಗಿ ಚಿಂತಿಸಿದ್ದೇನೆ. ಆದರೂ 'ಅಚಲ' ಇನ್ನೂ ಹೆಚ್ಚು ಹೆಚ್ಚು ಆಕರ್ಷಿತಗೊಳ್ಳಬೇಕೆಂದೆನಿಸುತ್ತದೆ. ಅದಕ್ಕಾಗಿ ಒಂದೆರಡು ಸಲಹೆಗಳು :

'ಅಚಲ'ದಲ್ಲಿ ಈಚೆಗೆ ರಾಜಕೀಯ ಮತ್ತು ಸಾಮಾಜಿಕ ಲೇಖನಗಳು ಕಡಿಮೆಯಾಗತೊಡಗಿವೆ, ಮಹಿಳೆಯರ ಸಾಮಾಜಿಕ ಸ್ಥಿತಿಯ ಮೇಲೆ ಬೆಳಕು ಚೆಲ್ಲುವಂಥ ಲೇಖನಗಳು ತೀರಾ ಅಗತ್ಯವಾಗಿದೆ. ಜತೆಗೆ ರಾಜಕೀಯ ಬೆಳವಣಿಗೆ. ಉದಾಹರಣೆಗೆ ರಷ್ಯದಲ್ಲಿ (ಹಿಂದಿನ ಸೋವಿಯತ್) ನಡೆಯುತ್ತಿರುವ ಬಗೆಗೆ ಒಂದು ಲೇಖನ ಅಗತ್ಯವೆನಿಸುತ್ತದೆ. ಸೈದ್ಧಾಂತಿಕ ತಳಹದಿ ಮೇಲೇ ಪ್ರಹಾರ ಬಿದ್ದಿತೇನೋ ಎಂಬ ಗಾಬರಿ ಮೂಡಿಸುವ ಬೆಳವಣಿಗೆ ಅಲ್ಲಾಗುತ್ತಿದೆ. ಇಂಥ ಜಾಗತಿಕ ಬೆಳವಣಿಗೆಗೆ 'ಅಚಲ' ಒಂದು ಲೇಖನ ಪ್ರಕಟಿಸಲಿ. ಬದಲಾಗುತ್ತಿರುವ ರಷ್ಯ ಸಮಾಜದಲ್ಲಿ ಮಹಿಳೆಯ ಸ್ಥಾನಮಾನವೇನು ಎಂಬ ಪ್ರಶ್ನೆಗೂ ಅದರಲ್ಲಿ ಉತ್ತರ ಲಭ್ಯವಾಗಲಿ.

ಬೆಂಗಳೂರು

— ಉಮಾ

# ಸ್ಪಂದನ

## ಇದು ಹೆಣ್ಣು ಮಗುವಿನ ಕತೆ........

ಕೋಲಾರದ ಆಸ್ಪತ್ರೆಯಲ್ಲಿ ಮಕ್ಕಳನ್ನು ಅದಲು ಬದಲಾಗಿರುವ ಬಗೆಗೆ ವರದಿಯಾಗಿದೆ. ಇಬ್ಬರು ತಾಯಂದಿರು 'ಇದು ನನ್ನದೇ ಮಗು' ಎಂದು ಹೇಳಿ ಹೇಳಿಕೊಂಡು ಈ ವಿಷಯದಲ್ಲಿ ವಿವಾದವನ್ನು ಎಬ್ಬಿಸಿದ್ದಾರೆ. ಹೆಚ್ಚಿನ ತನಿಖೆ ಮತ್ತು ಪರೀಕ್ಷೆಯಿಂದ ಯಾರ ಮಗು ಯಾರದೆಂಬುದು ಸ್ಪಷ್ಟವಾದೀತು.

ಇಲ್ಲಿ ಗಮನಿಸಬೇಕಾದ ಅಂಶ ಅನೇಕವಿವೆ. ಈ ಇಬ್ಬರೂ ತಾಯಂದಿರು 'ಗಂಡು ಮಗು ನನ್ನದೇ' ಎಂದು ಹೇಳಿಕೊಂಡಿದ್ದಾರೆ. ಮತ್ತೊಂದು ಹೆಣ್ಣು ಮಗು ಎಂದು ಹೇಳಬೇಕಾಗಿಲ್ಲವಲ್ಲ ? ಆದರೆ ಒಬ್ಬಳು ಹೆಣ್ಣು ಮಗುವಿನ ತಾಯಿಯಾಗಿರಲೇ ಬೇಕಲ್ಲ. ಆಗಷ್ಟೇ ಹುಟ್ಟಿದ ಈ ಹೆಣ್ಣು ಮಗು ತಾಯಿ ಇದ್ದೂ ಅನಾಥ. ಹೆತ್ತ ತಾಯಿಗೂ ಬೇಡವಾದ ಪರಿಸ್ಥಿತಿ. ಕದ್ದಾದರೂ ಗಂಡು ಮಗುವನ್ನು ತನ್ನದಾಗಿಸಿಕೊಳ್ಳಬೇಕೆಂಬ ತಾಯಿಯ ಮನಸ್ಥಿತಿಗೆ ನಮ್ಮ ಕ್ರೂರ ವ್ಯವಸ್ಥೆಯೇ ಕಾರಣ.

ಹುಟ್ಟಿನಿಂದಲೇ ಹೆತ್ತವರ ತಾತ್ಸಾರಕ್ಕೆ ಈಡಾಗುವ ಹೆಣ್ಣು ಮಗುವಿನದು ನಿರಂತರ ಸಂಕಷ್ಟದ ಬದುಕೇ. ಹುಟ್ಟುವ ಮುನ್ನ, ಭ್ರೂಣಾವಸ್ಥೆಯಲ್ಲಿಯೇ ಹಿಚುಕುವ ಪ್ರಯತ್ನ. ಹಾಗೂ ಹೀಗೂ ಹುಟ್ಟಿದರೆ 'ಅಯ್ಯೋ, ಹೆಣ್ಣೇ' ಎಂಬ ತಾತ್ಸಾರದ ನುಡಿ. ಅಡೆತಡೆಗಳನ್ನು ದಾಟಿ ಬಂದರೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಬಿರುನುಡಿ 'ಇವಳಿಗೇಕೆ ಉನ್ನತ ಶಿಕ್ಷಣ, ಇವಳಿಗೇಕೆ ಉದ್ಯೋಗ' ಎಂದು ಕೊಂಕು ನುಡಿಯುವವರೇ ಹೆಚ್ಚು.

ನಿರಂತರ ಹೋರಾಟದಿಂದ ಕೆಲಸ ಗಿಟ್ಟಿಸಿಕೊಂಡರೂ ಮದುವೆಯ ಮಾಯಾಲೋಕದಲ್ಲಿ ಅವಳಿಗಿರುವ ಸ್ಥಾನ ಮಾನವಾದರೂ ಏನು ? ತಂದೆ ತಾಯಿ ಒಪ್ಪಿದವನನ್ನು ಮದುವೆಯಾಗಿ ಗಂಡನ ಮನೆಗೆ ಹೋದರೆ ಅಲ್ಲಿ, ಪರಿಸ್ಥಿತಿ ಇನ್ನಷ್ಟು ಕಠಿಣ. ಅನುಸರಣೆ, ಹೊಂದಾಣಿಕೆ ಮಾಡಿಕೊಂಡರೂ ಅತ್ತೆ ಮನೆ ಮಂದಿಯ ಹಿಂಸೆ ಮಾತ್ರ ತಗ್ಗುವುದಿಲ್ಲ. ಬೆಂಕಿಗೆ ಆಹುತಿ ಆಗುವವರೇ ಹೆಚ್ಚು.

ಇದು ಎಲ್ಲರ ಅನುಭವ ಎನ್ನಲಾರೆ. ಆದರೆ ಈಗ ನಡೆಯುತ್ತಿರುವ ರೀತಿ ಹೀಗಿದೆ. ಸಂತೋಷ, ನೆಮ್ಮದಿಯ ಕುಟುಂಬ ಜೀವನ ಖಂಡಿತಾವಿದೆ. ಆದರೆ, ಹೆಣ್ಣೆಂದರೆ ಕಷ್ಟ ಅನುಭವಿಸುವವಳು' ಎಂದು ತೀರ್ಪು ನೀಡಿ 'ಮಜಾ' ನೋಡುವವರ ಸಂಖ್ಯೆ ಕೂಡ ಈಗ ಏರುತ್ತಿರುವುದು ಗಾಬರಿಯ ಸಂಗತಿಯಾಗಿದೆ. ಹಣಕ್ಕಾಗಿ ಮಾನವ ದಾನವನಾಗುತ್ತಿರುವುದು ಕ್ರೂರ ವ್ಯವಸ್ಥೆಗೊಂದು ಉದಾಹರಣೆ; ಇದಕ್ಕೆಲ್ಲಾ ಕೊನೆಯೇ ಇಲ್ಲವೆ ? ಖಂಡಿತಾ ಇದೆ. ನಮ್ಮ ಮಹಿಳೆಯರು ದೃಢಮನಸ್ಕರಾಗಿ ಸವಾಲುಗಳನ್ನು ಎದುರಿಸುವ ಶಕ್ತಿಯನ್ನು ಮೈಗೂಡಿಸಿಕೊಂಡರೆ ಮಾತ್ರ ಇದು ಸಾಧ್ಯ. ಇದಕ್ಕೆ ಸಂಘಟಿತ ಪ್ರಯತ್ನ ಕೂಡ ಮುಖ್ಯ. ಅಲ್ಲಿಯವರೆಗೆ ಕೋಲಾರ ಆಸ್ಪತ್ರೆಯಂಥ ಘಟನೆಗಳು ನಮ್ಮ ಸಮಾಜದಲ್ಲಿ ನಡೆಯುತ್ತಲೇ ಇರುತ್ತವೆ. ಅಂಥ ಅದಲು ಬದಲು ನಡೆದಿಲ್ಲ ಎಂದು ಅಧಿಕಾರಿಗಳು ಹೇಳಿಕೊಂಡಿದ್ದರೂ ಈ ಘಟನೆ ಚಿಂತನೆಗೆ ಎಡೆಮಾಡಿ ಕೊಡುತ್ತದೆ.

ಶಾರದಾ

## ಕಥೆ

# ಎಲ್ಲಕ್ಕೂ ಮಿತಿ ಉಂಟು

ಅವರೆಲ್ಲರೂ ಸಂಪೂರ್ಣವಾಗಿ ಸೋತು ಕೈಚೆಲ್ಲಿ ವಾಪಸಾಗುವಂತಾಯಿತು.

ಕೊನೆಗೆ, ಸತೀನಾಥರೇ ಬರಬೇಕಾಯಿತು ಈ ದೃಶ್ಯ ನಡೆಯುತ್ತಿದ್ದುದು ಆ ಮನೆಯ ಮೂರನೆ ಮಹಡಿ ಮೇಲೆ. ಸತೀನಾಥರು ಅಲ್ಲಿಗೆ ಬಂದರು. ಅವರಿಗೆ ರೇಗಿ ಹೋಗಿತ್ತು, "ಚೋಬಿ, ಎಲ್ಲದಕ್ಕೂ ಒಂದು ಮಿತಿ ಇದೆ, ಕೆಟ್ಟ ನಡವಳಿಕೆಗೂ ಒಂದು ಮಿತಿ ಇದೆ. ಮದುವೆಗೆ ಬಂದ ಅತಿಥಿಗಳಿಂದ ತುಂಬಿದ್ದ ಮನೆಯಲ್ಲಿ ನಮಗೆ ನೀನು ತೋರಿದ ಕೆಟ್ಟ ರೀತಿ ಹಾಗೂ ಸೌಜನ್ಯರಹಿತ ನಡವಳಿಕೆಗೆ ಮಾತ್ರ ಮಿತಿ ಇಲ್ಲವೇನೋ ಈ ಬಂಧು ಮಿತ್ರರ ಮುಂದೆ ನಾನು ಕಸಕ್ಕಿಂತ ಕಡೆಯಾಗುವಂತೆ ಮಾಡಿಬಿಟ್ಟೆ. ಜೊತೆಗೆ ನೀನು ಮೂರ್ಖಳೆಂದೆನಿಸಿಕೊಂಡು ಬಿಟ್ಟೆ ! ಹೋಗಲಿ. ನಮ್ಮ ಮೇಲೆ ಕೃಪೆಯಿಟ್ಟು ಈಗ ನನ್ನ ಜೊತೆ ಬಾ...." ಎಂದು ಅವರು ಕೋರಿದರು.

---

**ಆಶಾಪೂರ್ಣದೇವಿ**

**ಕನ್ನಡಕ್ಕೆ : ದೇವಿ**

---

ಮೂರನೆ ಮಹಡಿ ಮೇಲಿನ ಈ ಕೋಣೆ ಕಟ್ಟಲು ಅವರಿಗೆ ಕಾರ್ಪೊರೇಷನ್ನಿನ ಒಪ್ಪಿಗೆ ಇರಲಿಲ್ಲ. ಆದರೂ ಹಂಚಿನ ಛಾವಣಿ ಇದ್ದ ಈ ಕೋಣೆಯನ್ನು ವಿಶೇಷವಾಗಿ ಚೋಬಿಗೆಂದೇ ನಿರ್ಮಿಸಲಾಗಿತ್ತು. ಇಂದು ರಾತ್ರಿ ಚೋಬಿಯ ಕೋಣೆಯಲ್ಲಿ ದೀಪ ಇರಲಿಲ್ಲ. ಕೆಳಗೆ ಹಾಕಿದ್ದ ಪೆಂಡಾಲಿನ ದೀಪಾಲಂಕಾರದಿಂದ ಅಲ್ಪ ಸ್ವಲ್ಪ ಬೆಳಕು ಇಲ್ಲಿಯವರೆಗೆ ಬಂದಿತ್ತು, ಅಷ್ಟೆ.

ಚೋಬಿ ಕೋಣೆಯ ಬಾಗಿಲಲ್ಲಿ ನಿಂತಿದ್ದಳು. ಅವಳ ಕೆಲವು ಬೆರಳು ಮತ್ತು ಮುಖದ ಒಂದು ಬದಿ ಮಾತ್ರ ಕಾಣುತ್ತಿದ್ದು ಅಸ್ಪಷ್ಟ ಬೆಳಕಿನಲ್ಲಿ ಮುಖಭಾವವನ್ನು ಅರಿಯುವುದು ಸಾಧ್ಯವಿರಲಿಲ್ಲ. ಚೋಬಿ ತೀರಾ ಅಪರಿಚಿತವೆಂದೆನಿಸಿಕೊಳ್ಳುವ ಧ್ವನಿಯಲ್ಲಿ ಹೇಳಿದಳು, "ದಾದಾ, ಇಷ್ಟೊಂದು ಮೆಟ್ಟಿಲು ಹತ್ತುವ ತೊಂದರೆ ಏಕೆ ತೆಗೆದುಕೊಂಡೆ ? ನಾನು ಆಗಲೇ ಹೇಳಿದ್ದೇನೆ .......".

"ಹೌದು, ನನಗೆ ತಿಳಿದಿದೆ", ಎಂದು ರೇಗಿದ ಸತೀನಾಥರು, "ಮನೆಯಲ್ಲಿನ ಪ್ರತಿಯೊಬ್ಬರೂ ನಿನ್ನ ಬಳಿ ಬೇಡಿ ಹೋದದ್ದು ತಿಳಿದಿದೆ. ಊಟ ಬೇಡವೆಂದು ನೀನು ಹೇಳಿದ್ದೂ ತಿಳಿದಿದೆ ! ನಿನ್ನ ಅತ್ತಿಗೆ ಬಂದು ಕೈಮುಗಿದು ಕೇಳಿಕೊಂಡಳಂತೆ ಆದರೂ ನೀನು........".

ಚೋಬಿಯ ಮುಖಭಾವ ಆಗಲೂ ತಿಳಿಯಲಿಲ್ಲ. ಅವಳು ಕೋಣೆಯಿಂದ ಹೊರ ಬಂದರೆ ಮುಖ ಏನು ಹೇಳುತ್ತದೆ ಎಂಬುದು ಅರ್ಥವಾದೀತು. ಆದರೆ ಚೋಬಿ ಕೋಣೆಯಿಂದ ಹೊರಬಾರದೆ ನಿಂತಿದ್ದಾಳೆ. ಯಾರೋ ಲಕ್ಷ್ಮಣ ರೇಖೆ ಹಾಕಿದಂತೆ ನಿಂತೇ ಬಿಟ್ಟಿದ್ದಾಳೆ. ಚೋಬಿಗೆ ಕೋಣೆ ಒಳಗೆ ಪೂರ್ತಿಯಾಗಿ ತೂರಿ ಬಾಗಿಲು ಮುಚ್ಚಿ ಮಲಗಿದರೆ ಸಾಕೆನಿಸಿತ್ತು, ಆದರೆ ಅದು ಸಾಧ್ಯವಾಗಿರಲೇ ಇಲ್ಲ. ಒಬ್ಬರಲ್ಲ ಒಬ್ಬರು ಪದೇ ಪದೇ ಬಂದು "ಚೋಬಿ ಬೇಗ ಬಾ...... ಐನೂರು ಜನ ನಿನ್ನನ್ನು ಕೇಳುತ್ತಿದ್ದಾರೆ, ನಿನ್ನ ಅಣ್ಣ ಎಷ್ಟು ಸುಂದರನಾದ ಅಳಿಯನನ್ನು ತಂದಿದ್ದಾನೆ...... ನೋಡುವುದಿಲ್ಲವೆ ? ಮಗಳನ್ನು ಕಳುಹಿಸುವ ಕೋಣೆಯಲ್ಲಿ ನೀನು ಅಲ್ಪ ಸ್ವಲ್ಪ ಕೆಲಸ ಉಳಿಸಿಬಿಟ್ಟಿದ್ದಿಯಾ........ನಿನ್ನ ಅಣ್ಣ ರೇಗುತ್ತಿದ್ದಾನೆ....... ಖಂಡಿತಾ, ಬೇಗ ಬಾ ...." ಹೀಗೆ ಎಲ್ಲರೂ ಬಂದು ಪೀಡಿಸುತ್ತಿದ್ದರು.

ಆದರೂ ಚೋಬಿ ಅಲ್ಲಾಡಿಸಲಿಲ್ಲ. "ನನಗೆ ತುಂಬಾ ತಲೆನೋವು" ಎಂದಷ್ಟೇ ಅವಳು ಹೇಳಿದ್ದು.

ಹಾಗೆಂದು, ಅಂದು ಅಂಥ ಮಹತ್ವವಾದ ಘಟನೆ ಏನೂ ನಡೆದಿರಲಿಲ್ಲ. ಮದುವೆಯ ಸಿದ್ಧತೆಯಲ್ಲಿ ಚೋಬಿ

ಪೂರ್ಣವಾಗಿ ತೊಡಗಿಸಿಕೊಂಡಿದ್ದಳು. ಅಡುಗೆ ಮನೆ, ಸಾಮಾನು ಕೋಣೆ. ಊಟದ ಸ್ಥಳ, ದೇವರ ಪೂಜೆಗೆ ಅಣಿ ಮಾಡಿದ್ದ ಜಾಗ, ಎಲ್ಲಾ ಕಡೆಯೂ ಅವಳದೇ ಓಡಾಟ ಜಿಂಕೆಯಂತೆ ಚಲಿಸಿ ಪ್ರತಿಯೊಂದನ್ನು ನೋಡಿಕೊಂಡಿದ್ದಳು. ಸಂಜೆ, ಅದೊಂದು ಪ್ರಮುಖ್ಯವಲ್ಲದ ಘಟನೆಯನ್ನು ಯಾರೂ ಗಂಭೀರವಾಗಿ ಪರಿಗಣಿಸಲಿರಲಿಲ್ಲ. ವಧುವನ್ನು ಕಳುಹಿಸಿಕೊಡುವ ಸಮಯದಲ್ಲಿ ಎಲ್ಲರೂ ಚೋಬಿಗಾಗಿ ದೃಷ್ಟಿ ಹರಿಸಿದರು, ಎಲ್ಲಿ ಹೋದಳು ? ಚೋಬಿ ಎಲ್ಲಿ ? ಎಂದು ಎಲ್ಲರೂ ಕೇಳುವವರೇ, ಅರಿಶಿನ ಎಲ್ಲಿ ಇಟ್ಟಳೋ, ವಧುವಿಗೆ ಹಾಕುವ ಪರದಾವನ್ನು ಎಲ್ಲಿ ಇಟ್ಟಿರುವಳೋ. ಎಂದು ಹಲಬುವವರೇ ಪ್ರತಿಯೊಂದೂ ಎಲ್ಲಿದೆಯೆಂದು ಚೋಬಿಗೆ ಗೊತ್ತು. ವಧುವಿನ ತಾಯಿ ತಾನೆ ಎಷ್ಟು ನೋಡಿಕೊಳ್ಳುತ್ತಾಳೆ? ಅವಳು ಅತಿಥಿಗಳನ್ನು ಸ್ವಾಗತಿಸಬೇಕಲ್ಲ ?

ಇದೆಲ್ಲಾ ತಿಳಿದು ಚೋಬಿ ಮಾಯವಾಗಿರುವಳಲ್ಲ ! ಅದೂ ಇಂಥ ಮುಖ್ಯವಾದ ಸಮಯದಲ್ಲಿ ! ಛೆ ! ಬಹುಶಃ ಅವಳು ತನ್ನ ಗಂಡನನ್ನು ಸಮಾಧಾನಪಡಿಸುತ್ತಿರಬಹುದು, ಅದಕ್ಕೆ ಈಗಲೇ ಸಮಯವೇ ? ಅವನು ಹುಚ್ಚನೆಂಬುದು ಜಗತ್ತಿಗೇ ಗೊತ್ತು. ಅವನಿಗೊಂದು ನಿದ್ರೆ ಗುಳಿಗೆ ನೀಡಿ ಮದುವೆ ದಿನವಾದ ಇಂದು ಕೆಳಗೆ ಬಂದು ಪೂರ್ತಿ ಸಹಾಯ ಮಾಡಬಾರದೆ ? ಮದುವೆ ಕೆಲಸವೆಲ್ಲ ಮುಗಿದ ಮೇಲೆ ಅವಳು ಬೇಕಾದರೆ ಮದುವೆಯ ಊಟವನ್ನು ಮೇಲಕ್ಕೆ ಒಯ್ದು ತನ್ನ ಗಂಡನಿಗೆ ಉಣಿಸಿ ಮುದ್ದಾಡಲಿ ! ಆದರೆ ಈಗೇಕೆ ಹೀಗೆ ಮಾಡುತ್ತಾಳೆ ...... ಎಲ್ಲಕ್ಕೂ ಮಿತಿ ಇದೆ !

ಮನೆ ತುಂಬಾ ಅತಿಥಿಗಳಿದ್ದಾರೆ....... ನೀನು ನಿನ್ನ ಗಂಡನ ಜೊತೆ ಕೋಣೆ ಒಳಗೆ ಹುದುಗಿದ್ದೀಯಾ? "ಅವನು ತಿನ್ನುವುದಿಲ್ಲ....ನಾನು ಊಟ ಮಾಡಲಾರೆ" ಎಂದೆನ್ನುತ್ತಿರುವೆ .. ಛೀ ! ಎಂದೆನ್ನಬೇಕೆನಿಸುತ್ತದೆ. ಇಂಥ ಸುಂದರನಾದ ಅಳಿಯ, ಎಷ್ಟೊಂದು ಅಮೋದ ಪ್ರಮೋದ ವಧುವನ್ನು ಕಳುಹಿಸುವಾಗಿನ ಎಲ್ಲ ವಿಧಿ ವಿಧಾನಗಳು ಇಷ್ಟೆಲ್ಲವನ್ನು ಉದಾಸೀನವಾಗಿ ಕಾಣುವುದೆ ? ಮದುವೆ ಊಟದ ಶುಭ ಘಳಿಗೆಯಲ್ಲಿ ಉಪವಾಸವೆ ? ಅವಳ ಇಂಥ ಕೆಟ್ಟ ನಡವಳಿಕೆಯಾದ ಅವಳ ಅಣ್ಣನ ಮಗಳಿಗೆ ಒಳ್ಳೆಯದಾಗುವುದೆ ? ಅಣ್ಣ ಅತ್ತಿಗೆಯನ್ನು ಹೀಗೆ ಬಂದವರ ಮುಂದೆ ಪೇಚಿಗೆ ಸಿಲುಕಿಸುವುದೆ ? ಪ್ರತಿಯೊಂದಕ್ಕೂ ಮಿತಿ ಇದೆ !

"ನಿನ್ನ ಅಣ್ಣ ನಿನಗಿಂತ ಇಪ್ಪತ್ತು ವರ್ಷ ದೊಡ್ಡವನು ನಿನಗೆ ತಂದೆ ಇದ್ದಂತೆ. ನಿನ್ನ ಮದುವೆಯನ್ನು ಮಾಡಿದವನು ಈಗ ನಿನ್ನನ್ನೂ ನಿನ್ನ ಗಂಡನನ್ನು ನೋಡಿಕೊಳ್ಳುತ್ತಿದ್ದಾನೆ. ಇಂಥ ಅಣ್ಣ ಹುಚ್ಚನಾದ ನಿನ್ನ ಗಂಡನನ್ನು ಬೈದಿದ್ದರೆ ಅಥವಾ ತಳ್ಳಿದ್ದರೆ ಅದು ದೊಡ್ಡ ತಪ್ಪೆ ? ನೀನು ಅದಕ್ಕಾಗಿ ಹೀಗೆ ವರ್ತಿಸಬೇಕೆ ? ಕೃತಜ್ಞತೆ ಎನ್ನುವುದೇ ಇಲ್ಲವೆ ?"

ಇಂಥ "ಕೃತಘ್ನ" ಕೆಲಸ ಮಾಡಿದ ಮೇಲೆ ಚೋಬಿ ಹೇಗೆ ಕಾಣುವಳೆಂಬುದನ್ನು ನೋಡಲು ಅವಳ ಕೋಣೆ ಬಳಿ ಜನ ಸೇರಿದ್ದರು. ಅಲ್ಲೇನೋ ತಮಾಷೆ ನಡೆಯುತ್ತಿದೆ ಎಂಬಂತೆ ಎಲ್ಲರೂ ಸೇರಿದ್ದರು. ಕೆಲವರು ಸಹಾನುಭೂತಿಯ ಧ್ವನಿಯನ್ನು ಹೊರಡಿಸುತ್ತಿದ್ದರು "ಅವನಂತೂ ಹುಚ್ಚ, ಅತಿಥಿಗಳ ಮುಂದೆ ಸರಿಯಾಗಿ ನಡೆದುಕೊಂಡಿದಿಲ್ಲದಿರಬಹುದು, ನಿನಗೇನಾಗಿದೆ ? ನೀನು, ಹಿರಿಯ, ನಿನ್ನ ಮಗಳ ಮದುವೆ ದಿನ ನೀನು ನಿನ್ನ ತಂಗಿ ಗಂಡನನ್ನು ಹಾಗೆ ನೂಕಬಹುದೆ ? ನಿನ್ನ ತಂಗಿ ನಿನ್ನ ಜೊತೆ ಇದ್ದಾಳೆಂದು ಹಾಗೆ ಮಾಡಿದೆಯಾ ? ಅವಳೂ ಶ್ರೀಮಂತಳಾಗಿ ಬಂದಿದ್ದರೆ ಹೀಗೆ ಮಾಡುತ್ತಿದ್ದೆಯಾ ?" ಎಂದು ಕೇಳುವವರೂ ಅಲ್ಲಿ ಇದ್ದರು.

"ಈ ಮಾತು ಕೇಳುವ ಸ್ಥಿತಿಯಲ್ಲಿ ಇಲ್ಲ........ ನೀವೆಲ್ಲಾ ಹೋಗಿ" ಎಂದೇ ಚೋಬಿ ಹೇಳಿದ್ದಳು.

ಅದೆಲ್ಲಾ ನಡೆದದ್ದು ಸಂಜೆಗೆ ಸ್ವಲ್ಪ ಮುನ್ನ. ಹೆಚ್ಚೂ ಕಡಿಮೆ ಅತಿಥಿಗಳೆಲ್ಲರೂ ಹೊರಟು ಹೋದ ಮೇಲೆ, ಸರಿ ರಾತ್ರಿ ಸಮೀಪಿಸುತ್ತಿದ್ದಾಗ, ಒಳ್ಳೆಯ ಅಳಿಯನನ್ನು ಸಂಪಾದಿಸಿದ ಖುಷಿಯಲ್ಲಿದ್ದ ಸತೀನಾಥರಿಗೆ ನೆನಪಾಯಿತು. "ಖತೀಶ ಊಟ ಮಾಡಿಯಾಯಿತೆ?" ಎಂದು ಕೇಳಿದರು. ಆಗ ಅವರಿಗೆ ಬಹುಶಃ ಸಂಜೆ ನಡೆದ ಘಟನೆ ನೆನಪಾಗಿರಬೇಕು ....ಅತಿಥಿಗಳಿದ್ದ ಕೋಣೆಗೆ ಖತೀಶ ಬಂದ. ಅವನ ಕೈಯಲ್ಲಿ ಸಿಹಿ, ಕರಿದ ಮೀನು. ಇತರ ಖಾದ್ಯ ಪದಾರ್ಥಗಳಿದ್ದವು. ಖತೀಶ ಅದನ್ನು ತಿನ್ನತೊಡಗಿದಾಗ ಸತೀನಾಥರ ತಾಳ್ಮೆಗೆಟ್ಟಿತು. ಖತೀಶನ ಅನಾಗರಿಕ ವರ್ತನೆಯಿಂದ ಕುಪಿತಗೊಂಡು ಆ ಕೋಣೆಯಿಂದ ಹೊರಕ್ಕೆ ದೂಡಿದರು. ವರನ ಕಡೆಯವರು ಬಂದಿದ್ದರು. ಮದುವೆ ವಿಧಿ ವಿಧಾನಗಳಿಗಾಗಿ ಉಪವಾಸ ಬೇರೆ ತಾಳ್ಮೆಗೆಡದೆ ಇನ್ನೇನು ? ಆದರೂ ಅಷ್ಟೊಂದು ಕಠಿಣವಾಗಿ ವರ್ತಿಸಬಾರದಿತ್ತೆಂದು ಅಂದುಕೊಂಡಾಗ ರಾತ್ರಿಯಾಗಿಹೋಗಿತ್ತು.

ಆದರೆ ತಮ್ಮ ಈ ವರ್ತನೆಯಿಂದ ಹುಚ್ಚನೊಬ್ಬ ಸೂಕ್ಷ್ಮವಾಗಿ ಚಿಂತಿಸಿಬಿಡುತ್ತಾನೆಂದು ಅವರು ಯೋಚಿಸಿರಲಿಲ್ಲ. "ಅವನು ಪುನಃ ಅಡುಗೆ ಮನೆಗೆ ಹೋಗಿರುತ್ತಾನೆ" ಎಂದೇ ಊಹಿಸಿದರು. ಚೋಬಿ ಗೈರುಹಾಜರಿಯಿಂದಲೇ ಎಲ್ಲವೂ ಅರ್ಥವಾದದ್ದು. ವಧುವನ್ನು ಕಳುಹಿಸುವಾಗ ಎಲ್ಲವೂ ತಿಳಿಯಿತು. ದೊಡ್ಡ ಅತ್ತಿಗೆ ಹೇಳಿದರು ನನಗೆ ತಿಳಿಯದು ನೀನು ನಿನ್ನ ತಂಗಿಯ ಗಂಡನನ್ನು ಅಪಮಾನಗೊಳಿಸಿದೆಯಂತಲ್ಲಾ. ನೀನು ಅವನನ್ನು ಆಚೆಗೆ ನೂಕಿದೆಯಂತಲ್ಲಾ ....ನಿನ್ನ ತಂಗಿ ತನ್ನ ಗಂಡನನ್ನು ಅವಳ ಕೋಣೆಗೆ ಒಯ್ದಿದ್ದಾಳೆ. ಕೆಳಗೆ ಬರುವುದಿಲ್ಲವಂತೆ. ಅಡುಗೆಯವರನ್ನು ಬೆದರಿಸಿ ಅವಳ ಗಂಡ ಒಂದಿಷ್ಟು ಊಟ ಒಯ್ದು ಕೋಪದಿಂದ ಎಲ್ಲೆಡೆ ಚೆಲ್ಲಾಡಿದ್ದಾನೆ. ಆದರೆ, ಆತ ಹುಚ್ಚ. ಹಾಗೆಂದು ನಿನ್ನ ತಂಗಿ ಹುಚ್ಚಿಯಲ್ಲ ......"

ಇದನ್ನು ಕೇಳಿದಾಗ ಸತೀನಾಥರಿಗೂ ಕೋಪ ಬಂದಿತ್ತು. ಆದರೆ ಈಗ ಅವರೂ ಶಾಂತರಾಗಿದ್ದಾರೆ. ರಾತ್ರಿಯಾಗಿದೆ, ಊಟದ ನೆನಪಾಗಿದೆ, "ಖತೀಶ ಊಟ ಮಾಡಿದನಾ?" ಎಂದು ಕೇಳಿದ್ದಾರೆ, ಯಾರು ಕರೆದರೂ ಚೋಬಿ ಕೆಳಗಿಳಿದು ಬರಲಿಲ್ಲ ಎಂದೂ ತಿಳಿಯಿತು, ಅವರಿಗೆ ರೇಗಿ ಹೋಯಿತು, "ಕೈಮುಗಿಯುವೆ........ಚೋಬಿ ಬಾ........ನಮ್ಮ ಜೊತೆ ಊಟ ಮಾಡು" ಎಂದರು.

ಚೋಬಿಯ ಧ್ವನಿ ನಡುಗಿತೆ ? ಅಥವಾ ಸತೀನಾಥರು ಹಾಗೆಂದು ಊಹಿಸಿಕೊಂಡರೇ ? ಚೋಬಿ ಸ್ಪಷ್ಟವಾಗಿ ಹೇಳಿದಳು, "ದಾದಾ. ಹೀಗೇಕೆ ಮಾತನಾಡುವೆ ? ನನಗೆ ಊಟ ಮಾಡಲಾಗದೆಂದು ನಾನು ಹೇಳಲಿಲ್ಲವೆ ? ನನಗೆ ಭಯಂಕರ ತಲೆ ನೋವು ?"

ಖತೀಶ ಊಟಮಾಡಲೆತ್ನಿಸಿದ್ದ ದೃಶ್ಯ ನೆನಪಾಯಿತು, ಎಷ್ಟಾಗಲಿ, ಅವಳ ಗಂಡನಲ್ಲವೆ ? "ಹೋಗಲಿ ಬಿಡು. ನಿನಗೆ ಊಟ ಮಾಡಲಾದೀತೋ ಇಲ್ಲವೊ........ ನನ್ನ ಜೊತೆ ಬಂದು ಕೂಡು........ ಖತೀಶನಿಗೆ ಊಟ ಕಳುಹಿಸಲು ನಾನು ಹೇಳುವೆ........ಅವನು ಉಂಡ ಮೇಲೆ ನೀನು ಕೆಳಗೆ ಇಳಿದು ಬಾ" ಎಂದು ಸತೀನಾಥರು ಮೃದುವಾಗಿಯೇ ಹೇಳಿದರು, ಚೋಬಿ ಹಾಗೆ ನಿಂತು. "ದಾದಾ, ಅವರು ಉಣ್ಣುವುದಿಲ್ಲ !" ಎಂದಳು, ಸತೀನಾಥರ ತಾಳ್ಮೆ ಮತ್ತೆ ಕೆಟ್ಟಿತು. ಅವರು ದಡದಡನೆ ಕೆಳಗೆ ಇಳಿದರು.

ಅದೇ ವೇಳೆಗೆ ಅಮಲ್ ಮಹಡಿ ಹತ್ತುತ್ತಿದ್ದ. ಕೊನೆ ಪಂಕ್ತಿವರೆಗೆ ಊಟ ಬಡಿಸುವ ಆಶ್ವಾಸನೆಯನ್ನು ಅವನು ನೀಡಿದ್ದ, ಚೋಬಿಯ ಹಟದಿಂದ ಕೊನೆ ಪಂಕ್ತಿ ಇನ್ನೂ ಆಗಿರಲಿಲ್ಲ. ರಾತ್ರಿ ಒಂದು ಗಂಟೆಯಾಗುತ್ತಿತ್ತು.

ಅಮಲ್ ಈ ಕುಟುಂಬದ ಬಂಧುವೇನೂ ಅಲ್ಲ. ನೆರೆಮನೆಯವ ತಾನೇ ಮುಂದೆ ಬಂದು ಹೊಣೆಹೊತ್ತಿದ್ದ

ತಮಗೆ ಡಿಕ್ಕಿ ಹೊಡೆದ ಅಮಲನನ್ನು ಕಂಡು ಸತೀ ನಾಥರು. "ನೀನೊಬ್ಬ ಉಳಿದಿದ್ದೀಯಾ, ನೋಡು" ಎಂದು ವ್ಯಂಗವಾಗಿ ನುಡಿದು ಕೆಳಗಿಳಿದರು.

ಅಲ್ಲಿಗೆ ಬರುವ ಮುನ್ನ ಅಮಲ ಎಲ್ಲವನ್ನು ಅರಿತುಕೊಂಡೇ ಬಂದಿದ್ದ. ಇಷ್ಟೊಂದು ದೃಢಮನಸ್ಕಳಾದಾಗ ಚೋಬಿ ಹೇಗೆ ಕಾಣುತ್ತಾಳೆ ಎಂಬುವುದನ್ನು ನೋಡಲು ಬಂದಿದ್ದ. ಬಾಗಿಲು ಮುಚ್ಚುವುದರಲ್ಲಿದ್ದ ಚೋಬಿಯು ಅಮಲನನ್ನು ಕಂಡು ಹಾಗೇ ನಿಂತಳು.

"ದೀಪ ಹಾಕಬಾರದೆ" "ಅದರಿಂದೇನು ಪ್ರಯೋಜನಾ?" ಎಂದು ಚೋಬಿ ಭಾವನಾರಹಿತ ಧ್ವನಿಯಲ್ಲಿ ಕೇಳಿದಳು,

"ಸ್ಪಷ್ಟವಾಗಿ ಉಪಯೋಗ ಇಲ್ಲ.......ಆದರೆ ನೀನು ಭೂತದಂತೆ ಕಾಣುತ್ತಿರುವೆ ಅದಕ್ಕೆ ......."

ಚೋಬಿ ಏನೂ ಭಾವನೆ ವ್ಯಕ್ತಪಡಿಸಲಿಲ್ಲ, ತನ್ನ ಬಾಲ್ಯದ ಸ್ನೇಹಿತನ ಹಾಸ್ಯಕ್ಕೆ ನಗೆಯನ್ನೂ ಸೂಚಿಸಲಿಲ್ಲ. ಅದೇ ರೀತಿ, ಅರ್ಧ ಬೆಳಕು, ಅರ್ಧ ಕತ್ತಲಿನಲ್ಲಿ ನಿಂತೇ ಇದ್ದಳು.

ಅರ್ಧ ಮುಚ್ಚಿದ ಬಾಗಿಲಿನ ಮೇಲೆ ಬೋಬಿ ಕೈ ಇಟ್ಟು ನಿಂತಿದ್ದರಿಂದ ಕೋಣೆ ಒಳಗೆ ಏನೂ ಕಾಣುತ್ತಿರಲಿಲ್ಲ. "ಖತೀಶ ಮಲಗಿರುವರೇ?" ಎಂದು ಕೇಳಿದ. ಈಗ ಕಾರಣವಿಲ್ಲದೆ ನಕ್ಕ ಚೋಬಿ. "ಹೌದು" ಎಂದಳು. "ಸತೀನಾಥರು ಅವನ ಬಗ್ಗೆ ಸ್ವಲ್ಪ ನಿರ್ದಯಿಗಳಾಗಿದ್ದರೆಂದು ಕಿವಿಗೆ ಬಿತ್ತು. ಆದರೆ ಚೋಬಿ ನೀನು ಇಂಥ ಉಗ್ರ ಕ್ರಮ ಕೈಗೊಳ್ಳಬಾರದಿತ್ತು. ನನಗೆ ಒಂದು ರೀತಿ ಮುಜುಗರವಾಗಿದೆ.... ..."

ಚೋಬಿ ಈಗ ಜೋರಾಗಿ ನಕ್ಕಳು. ಅಮಲ ಬೆಚ್ಚಿಬಿದ್ದ. ಅವಳ ನಗೆ ಭೂತದಂತಿದೆ "ನನ್ನ ಉದ್ಧಟತನದಿಂದ ನಿನಗೇಕೆ ಮುಜುಗರವಾಗಬೇಕು" ಎಂದು ನಗುತ್ತಲೇ ಕೇಳಿದಳು,

ಚೋಬಿಯು ಉದ್ಧಟತನ. ಕ್ರೂರತನ ನೋಡಲು ಕಡ್ಡಿಗೀರಲೇ ಎಂದು ಒಮ್ಮೆ ಅಮಲ ಯೋಚಿಸಿದ ಆದರೆ ದೀಪ ಬೆಳಗಿಸಲಿಲ್ಲ. ಚೋಬಿಯ ಈ ವರ್ತನೆ ಅವನಿಗೆ ಒಗಟಾಗಿತ್ತು. ಚೋಬಿಯ ಮದುವೆ ಮಾಡಿದಾಗ ಅವಳ ಗಂಡ ಹುಚ್ಚನೆಂಬುದು ಯಾರಿಗೂ ತಿಳಿದಿರಲಿಲ್ಲ. ಅವಳ ಅಣ್ಣ ಮೋಸ ಹೋಗಿದ್ದ. ಆದರೆ ಚೋಬಿ ಎಂದೂ ಅಣ್ಣನನ್ನು ದೂರಿರಲಿಲ್ಲ. ಖತೀಶನ ಅಣ್ಣ, ಗಂಡ-ಹೆಂಡತಿಯನ್ನು ಅವಳ ತೌರೂರಿಗೆ ಅಟ್ಟಿದ್ದ. ಆದರೂ ಚೋಬಿ ಏನೂ ಮಾತಾಡಿರಲಿಲ್ಲ. ಆವಳು ಮದುವೆಯಾಗದ ಮಗಳಂತೆ ಮನೆಯ ಹೊಣೆ ಹೊತ್ತಿದ್ದಳು. ಈಗ ಜತೆಗೆ ಗಂಡನ ರಕ್ಷಣೆ ಬೇರೆ, ಆವಳು ಪ್ರತಿಯೊಂದಕ್ಕೂ ಹಾಸ್ಯದ ಮುಖ ಮಾಡಿಕೊಂಡು ಯಾರು ಏನೆಂದರೂ ನಕ್ಕು ಸುಮ್ಮನಾಗಿ ಬಿಡುತ್ತಿದ್ದಳು ಆ ಮುಖದ ಮರೆಯಲ್ಲಿ ಏನಿದೆ ಎಂಬುದು ಯಾರಿಗೂ ತಿಳಿಯದು ಅಮಲನಿಗೆ ಎಲ್ಲವೂ ಗೊತ್ತು ಪ್ರತಿ ದಿನ ಅವರ ಮನೆಗೆ ಬರುವವ

ಗಂಡನ ಬಗೆಗೆ ತಮಾಷೆಯಾಗಿಯೇ ಇರುತ್ತಿದ್ದಳು ಯಾರಾದರೂ ಟೀಕಿಸಿದರೆ ಕೋಪಿಸಿಕೊಳ್ಳುತ್ತಿರಲಿಲ್ಲ. ನಕ್ಕುಬಿಡುತ್ತಿದ್ಧಳು. ಅಂಥ ಚೋಬಿ ಇಂದು ಹೀಗೇಕೆ ? ಒಂದು ಅಪಮಾನಕ್ಕೆ ಇಂಥ ಧೋರಣೆಯೆ ?

ಚೋಬಿಯ ಈ ಬದಲಾದ ಧೋರಣೆಗೆ ಸತೀನಾಥನ ಹೆಂಡತಿ ಕೊಟ್ಟ ಕಾರಣ-ಅಸೂಯೆ ? ಅಣ್ಣನ ಮಗಳಿಗೆ ಇಂಥ ಸುಂದರನಾದ ಗಂಡ ದೊರೆತಿದ್ದಾನೆಂಬ ಅಸೂಯೆ ಅದು !

ಚೋಬಿಯ ಮನದಲ್ಲಿ ಅಂಥ ಭಾವನೆ ಮೂಡುವುದು ಸಾಧ್ಯವೇ ಇಲ್ಲ. ಆದರೆ ಅವಳ ಇಂಥ ಕೆಟ್ಟ ಹಟ........ಅಸೂಯೆಯಿಂದಲೇ ಇರಬಹುದೇ ? ಎಂಥ ಗಟ್ಟಿ ಮನಸ್ಸಿನವಳಾಗಿದ್ದ ಚೋಬಿ ಹೀಗೇಕೆ ಆಡುತ್ತಿದ್ದಾಳೆ ? ಅಮಲ ತನ್ನ ಎಲ್ಲ ಚಿಂತನೆಯನ್ನು ಬದಿಗೊತ್ತಿ "ಚೋಬಿ ನೀನು ಹೃದಯಹೀನಳಾಗಿ ಕಾಣುತ್ತಿರುವೆ" ಎಂದ,

"ಆದನ್ನು ಅರಿಯಲೆಂದು ಇಂದು ಇಲ್ಲಿಗೆ ಬಂದೆಯಾ ? ನಮ್ಮೆಲ್ಲರ ಜೊತೆ ಊಟ ಮಾಡಲು ಬಾ ಎಂದು ನೀನೂ ಕರೆಯುತ್ತಿಲ್ಲವೇನೋ ?"

"ಇಲ್ಲ ನೀನು ಖತೀಶ್ ಬಾಬುವನ್ನೇಕೆ ಶಿಕ್ಷಿಸುತ್ತಿರುವೆ ? ಕೋಣೆಯಲ್ಲಿ ಕೂಡಿ ಹಾಕಿರುವೆ. ಎಲ್ಲರ ಜೊತೆ ಕೂತು ಉಣುವುದೆಂದರೆ ಅವನಿಗೆಷ್ಟು ಸಂತೋಷ!........

ಅವನು ನನಗೆ "ನೀನು ಬಡಿಸುತ್ತೀಯಾ ತಾನೆ ? ಎಂದು ಕೇಳಿದ".

ಚೋಬಿಯ ಧ್ವನಿ ನಡುಗಿತೆ ? ಆದರೂ ಭಾವನಾ ರಹಿತಳಾಗಿ ಹೇಳಿದಳು "ಹೂಂ........ನೀನು ಬಡಿಸುವ ವರೆಗೆ ಆತ ಕಾಯಲಿಲ್ಲ. ಅವನೇ........"

"ಚೋಬಿ. ಆದರ ಬಗ್ಗೆ ಮಾತು ಬೇಡ ಊಟ ಮಾಡಬಾರದೆಂದು ನೀನು ನಿರ್ಧರಿಸಿದ್ದರೆ ಸರಿ, ಅವನನ್ನು ಎಬ್ಬಿಸು, ನನ್ನ ಮಾತು ಉಳಿಸಿಕೊಳ್ಳುವೆ ?"

ಚೋಬಿ ಏನೂ ಕೇಳಿಸಿಕೊಳ್ಳದವಳಂತೆ. "ಇಲ್ಲ ಆತ ಊಟ ಮಾಡುವುದಿಲ್ಲ ಎಂದಳು.

"ಚೋಬಿ ನೀನು ತುಂಬಾ ಕ್ರೂರವಾಗಿರುವೆ ಪ್ರತಿ ಯೊಂದಕ್ಕೂ ಮಿತಿ ಇದೆ. ನಿನಗೆ ಕೋಪ ಬಂದಿದೆ ಎಂದು ಅವನಿಗೆ ಇಂದು ರಾತ್ರಿ ಊಟ ತಡೆದಿರುವೆ ನಾಳೆಯದೇನು ಮತ್ತೆ "?

ಚೋಬಿ ಜೋರಾಗಿ ನಕ್ಕಳು, ತುಂಬಾ ಗಟ್ಟಿಯಾಗಿ "ಆತ ನಾಳೆ ಊಟ ಮಾಡುವುದಿಲ್ಲ ಅ ಮ ಲ, ಆತ ಎಂದಿಗೂ ಊಟ ಮಾಡಲಾರ........" ಅಮಲ ನಡುಗಿ ದನೇ ? ಚೋಬಿ ನಕ್ಕಾಗ ಭೂತದಂತೆ ಕಂಡು ಬಂದಳೆ ? "ಚೋಬಿ!" ಎಂದು ಅಮಲ ಕಿರುಚಿದ. ಚೋಬಿ ಅಲ್ಲಾಡ ಲಿಲ್ಲ. ಶಿಲೆಯಂತೆ ನಿಂತೇ ಇದ್ದಳು. ಅಮಲ ತಪ್ಪು ಮಾಡಿಬಿಟ್ಟ–ಎಂದೂ ಪ್ರಯತ್ನಿಸಿದ ತ ಪ್ಪು ಅದು. ಅಮಲ ಅವಳ ಸಮೀಪ ಬಂದು, ಬಾಗಿಲ ಮೇಲಿದ್ದ ಅವಳ ಕೈ ಅ ಮು ಕಿ. ಶಕ್ತಿ ಎಲ್ಲಾ ಉಪಯೋಗಿಸಿ "ಚೋಬಿ, ದೀಪ ಹಾಕು ದಯವಿಟ್ಟು........"

ನಿಧಾನವಾಗಿ ಕೈ ತೆಗೆದುಕೊಂಡ ಚೋಬಿ. "ಏನು ಪ್ರಯೋಜನಾ?" ಎಂದಳು.

"ನಾನೇ ನೋಡಬೇಕಾಗಿದೆ"

"ಅಲ್ಲಿ ನೋಡಲೇನೂ ಇಲ್ಲ, ಅಮಲ !"

"ಚೋಬಿ, ನಿನ್ನದೇ ಸರಿ ಎಂಬ ವಿಶ್ವಾಸ ಬೇಡ. ತಪ್ಪು ಗ್ರಹಿಕೆ ಇರಬಹುದು. ಬಾಗಿಲಿನಿಂದ ಆಚೆ ಸರಿ ನಾನು ನೋಡುವೆ........"

ಚೋಬಿ ಸರಿಯಲಿಲ್ಲ, ಅವಳು ದೃಢವಾಗಿ ಹೇಳಿ ದಳು. "ನಾನು ಸ್ಪಷ್ಟವಾಗಿ ಹೇಳುವೆ, ಅಲ್ಲಿ ಖಂಡಿತಾ ನೋಡಲೇನೂ ಇಲ್ಲ" ಅ ಮ ಲ ಕೂಡ ಭೂತವಾಗಿ ಹೋದನೆ ? ಅವನ ಮುಖವೇಕೆ ಬಿಳಚಿಕೊಂಡಿತು ? ಕೆಳಗ ಜನ ಸೇರಿದ್ದಾರೆಂಬುದನ್ನು ಮರೆತನೆ ? ಅವರಿಗೆಲ್ಲ ಇವರ ಬಾಲ್ಯ ತಿಳಿದಿದೆ. ಕೆಳಗೆ ಹೋಗಬೇಕೆಂಬ ನೆನಪು ಬಂದಿತು. ಕ್ಷೀಣ ದನಿಯಲ್ಲಿ ಕೇಳಿದ" ಚೋಬಿ, ಇದು ಹೇಗಾಯಿತು ?"

"ಹುಚ್ಚು ಸಾಹಸ, ಬೇರೇನು ? ಸಾಲು ಊಟ ಮಾಡಲು ಬಿಡಲಿಲ್ಲ" ಎಂದು ಹೇಳಿಕೊಂಡು ತನ್ನ ತಲೆ ಯನ್ನು ತಾನೇ ಚಚ್ಚಿಕೊಳ್ಳತೊಡಗಿದೆ........" ಎಂದು ಚೋಬಿ ತೀರಾ ಅಪರಿಚಿತ ಧ್ವನಿಯಲ್ಲಿ ಹೇಳಿದಳು.

"ಚೋಬಿ ನೀನು ಕಲ್ಲಾಗಿದ್ದೀಯಾ ?"

"ಇರಬಹುದು !"

"ಅವರಿಗೆಲ್ಲ ಏನು ಹೇಳಲಿ ?"

"ದಯವಿಟ್ಟು ಏನೂ ಹೇಳಬೇಡ. ವಧೂ-ವರರಿ ದ್ದಾರೆ, ಅವರ ರಾತ್ರಿಯನ್ನು ಹಾಳು ಮಾಡಬೇಡ"

"ಚೋಬಿ ಹೇಗೆ ನಿಯಂತ್ರಿಸಿಕೊಂಡಿರುವೆ"

"ಮಾಡಲೇಬೇಕು. ಎ ಲ್ಲ ಕ್ಕೂ ಮಿತಿ ಇದೆ. ಸಂತೋಷದ ಘಳಿಗೆಯಲ್ಲಿ ನನ್ನ ದುಃಖ ಒಯ್ಯಲೇ ? ಹಾಗೂ ಹೀಗೂ ರಾತ್ರಿ ಮಲಗಿಬಿಟ್ಟರೆ ಒಳಿತು........" ಚೋಬಿ ಬಾಗಿಲು ಹಾಕಿದಳು. ಹೌದು ಚೋಬಿ ಹೀಗೆ ಕತ್ತಲಲ್ಲಿ ಸ್ವಲ್ಪ ಸಮಯವಿದ್ದರೆ ಸ್ವಲ್ಪವಾದರೂ ಶಕ್ತಿ ಯನ್ನು ಪುನಃ ಪಡೆದು ಕೊಳ್ಳುವಳು. ಬೆಳಿಗ್ಗೆ ಬಹುಶಃ ಕೆಳಗೆ ಹೋಗಿ, "ಮದುವೆ ಕಾರಣ ನಿಮಗೆಲ್ಲಾ ತೊಂದರೆ ಮಾಡುವುದು ಬೇಡವೆಂದು ಭಾವಿಸಿಕೊಂಡೆ. ಆದರೆ ಈಗ ಕೂಡಲೇಬೇಕು. ದಯೆಯಿಟ್ಟು ಬಂದು ನೋಡಿ ....... ನೀವೇ ತಾನೆ ಕೊನೆ ವಿಧಿ ವಿಧಾನಗಳನ್ನು ಮಾಡಬೇಕು. ಎಂದು ಹೇಳುವಳೇನೋ ?. O



# ಸ್ತ್ರೀವಾದ ಮತ್ತು ಮಾನವ ಶಾಸ್ತ್ರ

ಸ್ತ್ರೀವಾದ ಮತ್ತು ಮಾನವ ಶಾಸ್ತ್ರ ಬಹಳ ವಿಚಿತ್ರ ಜೋಡಿಯಾಗಿ ಕಾಣಬಹುದು. ಮಹಿಳಾ ವಿಜ್ಞಾನಿಗಳು. ಸ್ತ್ರೀವಾದವನ್ನು, ವಿಜ್ಞಾನಕ್ಕೂ ಎಳೆದೊಯ್ಯುತ್ತಿದ್ದಾರೆಯೆ. ಎಂದು ಹುಬ್ಬೇರಬಹುದು, ಆದರೆ ವಿಜ್ಞಾನದಲ್ಲಿ ಕೂಡಾ ವಿಜ್ಞಾನಿಯ ಪೂರ್ವಗ್ರಹಗಳು ಹೇಗೆ ಒಂದು ವೈಜ್ಞಾನಿಕ ಸತ್ಯವನ್ನು ತಮಗೆ ಹಿತವಾದ ರೀತಿಯಲ್ಲಿ ಅರ್ಥೈಸುವಲ್ಲಿ ಪುರುಷ ಪ್ರಧಾನ ನಂಬಿಕೆಗಳಿಗನುಗುಣವಾಗಿ ಪ್ರತಿಪಾದಿಸುವಲ್ಲಿ ಕೆಲಸ ಮಾಡುತ್ತದೆ ಎನ್ನುವುದನ್ನು ಮಾನವ ಶಾಸ್ತ್ರ (Anthropology) ಸ್ಪಷ್ಟವಾಗಿ ತೋರಿಸಿದೆ

❋ ನೇಮಿಚಂದ್ರ

ಹೆಚ್ಚಿನ ವಿವರಕ್ಕೆ ಹೋಗುವ ಮೊದಲು ಮಾನವ ಶಾಸ್ತ್ರದ ಮೂಲ ತತ್ವಗಳತ್ತ ಒಂದು ನೋಟ ಹರಿಸೋಣ "ಮಿಲಿಯ ಮಿಲಿಯ ವರ್ಷಗಳ ಹಿಂದೆ. ವಾನರ ಜಾತಿಯ ಗಂಡುಗಳು ಬೇಟೆಗೆ ಹೋಗುತ್ತಿದ್ದವು, ಹೆಣ್ಣುಗಳು ತಮ್ಮ ಪಿಳ್ಳೆಗಳನ್ನು ಕಟ್ಟಿಕೊಂಡು ಗಂಡು ಬೇಟೆಯಾಡಿ ತರುವ ಆಹಾರಕ್ಕಾಗಿ ಕಾಯುತ್ತ ಕುಳಿತಿರುತ್ತಿದ್ದವು. ಹೆಣ್ಣು ಮಾಡುತ್ತಿದ್ದ ಕೆಲಸವೇನೆಂದರೆ ಆಹಾರ ಶೇಖರಣೆ ಮತ್ತು ಮರಿಗಳ ಪೋಷಣೆ, ಸತ್ತ ಮುತ್ತಲುಗಳ ಕಾಡುಸುತ್ತಿ ಒಂದಿಷ್ಟು ಆಹಾರ ಒಟ್ಟೈಸುತ್ತಿದ್ದವು. ಬೇಟೆಗೆ ಹೋದ ಗಂಡು ಗಾತ್ರದಲ್ಲಿ ಬೆಳೆದು ಬಲಾಢ್ಯನಾಗಿ, ಬೇಟೆಗಾಗಿ ಕೈಗಳ ಉಪಯೋಗಿಸುತ್ತಾ. ನಡೆದಾಡಲು ಎರಡು ಕಾಲುಗಳಷ್ಟನ್ನೇ ಬಳಸುವುದು ಅನಿವಾರ್ಯವಾಯ್ತು. ಹೀಗೆ ನಾಲ್ಕು ಕಾಲಿನ ವಾನರ, ಎರಡು ಕಾಲಿನ ಮಾನವನಾಗಿ ವಿಕಾಸಗೊಂಡ, ಬೇಟೆಯ ಆಯುಧಗಳ ತಯಾರಿಸಿದ, ತನಗೆ ಕಾದ ಹೆಣ್ಣಿಗೆ. ಮರಿಗಳಿಗೆ ಬೇಟೆಯನ್ನು ಎಳೆದು ತಂದು, ಮೆಲ್ಲನೆ ಸಾಮಾಜಿಕ ಸಂಬಂಧ ಗಂಡು ಹೆಣ್ಣು ಜೊತೆಯಾಗಿ ತಾವು ಹೆತ್ತ ಮಕ್ಕಳ ಕಾಪಾಡುವ ಕುಟುಂಬ ವ್ಯವಸ್ಥೆ ರೂಪುಗೊಂಡಿತು. ಹೀಗೆ ಜೀವ ವಿಕಾಸದ ಹಾದಿಯಲ್ಲಿ ಗಂಡಿನದೇ ಪ್ರಮುಖ ಪಾತ್ರ. ಪುರುಷ ಮಾನವ ಶಾಸ್ತ್ರಜ್ಞರು ಜಗತ್ತಿಗೆ ನೀಡಿರುವ ಈ ಚಿತ್ರ "ಅರ್ಧ ಸತ್ಯ" ಮಾತ್ರ. ಹೆಣ್ಣು ಈ ಜೀವ ವಿಕಾಸದ ಹಾದಿಯಲ್ಲಿ ನಿಷ್ಕ್ರಿಯವಾಗಿ ನೇಪಥ್ಯದಲ್ಲಿ ಉಳಿದವಳಾಗಿದ್ದಾಳೆ.

ಮಾನವ ಶಾಸ್ತ್ರ ಇಲ್ಲಿಯವರೆಗೂ ಪುರುಷ ಪ್ರಧಾನ ರಂಗವಾಗಿತ್ತು. ಇದೀಗ ಸ್ತ್ರೀಯರು ಈ ರಂಗದಲ್ಲಿ ಪ್ರವೇಶಿಸುತ್ತಿದ್ದಂತೆ, ಆನ್ತ್ರೋಪಾಲಜಿಯ ಮೂಲಸಿದ್ಧಾಂತಗಳ ಪ್ರಶ್ನಿಸ ಹೊರಟಿದ್ದಾರೆ. ಅಲ್ಲಿಯ ಲೋಪಗಳಿಗೆ ಬೊಟ್ಟು ಇಟ್ಟು ತೋರಿಸುತ್ತಿದ್ದಾರೆ ಸಂತಾಕ್ರುಜ್‌ನ ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಆಡ್ರಿನ್ ಜಿಲಾಮನ್ ಎಂಬ ಮಹಿಳಾ ವಿಜ್ಞಾನಿ, ಜೀವ ವಿಕಾಸದ ಅತ್ಯಂತ ಮೂಲಭೂತ ವಿಷಯಗಳೊಡನೆ ಗುದ್ದಾಡುತ್ತಿದ್ದಾಳೆ. ಆಕೆಯ ಅಧ್ಯಯನ ಈ ಮೂಲಭೂತ ತತ್ವಗಳು ತಪ್ಪಿರಬಹುದೆಂದು ಸೂಚಿಸುತ್ತಿವೆ. ಹೆಣ್ಣಿನ ಆಹಾರ ಶೇಖರಣೆಗೆ ಮತ್ತು ಮಕ್ಕಳ ಲಾಲನೆಗೆ ಕೈಗಳ ಉಪಯೋಗದ ಅವಶ್ಯಕತೆ ಅಧಿಕವಿದ್ದು, ಭೂಮಿಯ ಮೇಲೆ ಮಾನವ ಎರಡು ಕಾಲಿನಲ್ಲಿ ನಿಲ್ಲುವಂತಾಯಿತೆಂದು. ಜಿಲ್‌ಮನ್ ಪ್ರಬಲ ವಾದಗಳ ಹೂಡಿದ್ದಾಳೆ.. "ಗಂಡಿನ ಬೇಟೆಯಷ್ಟೇ ಮಾನವನನ್ನು ಎರಡು ಕಾಲಿನಲ್ಲಿ ನಿಲ್ಲಿಸಿತೆಂದು" ಮಾನವ ಶಾಸ್ತ್ರಜ್ಞರು ಹೇಳಲು ಮೂಲ ಕಾರಣ-ಈ ಚಿತ್ರವನ್ನು ಬಿತ್ತ

ರಿಸುತ್ತಿದ್ದವರು ಪುರುಷ ಅಂಥ್ರೋಪಾಲಿಜಿಸ್ಟ್‌ಗಳೆಂದು ಈಕೆಯ ವಾದ. "ವಿಜ್ಞಾನ ಯಾವಾಗಲೂ ಗಂಡು ಚಟುವಟಿಕೆಯೆಂಬ ಕಲ್ಪನೆ ಇದೆ. ಇಂಥಾ ಗಂಡು ಸಿದ್ಧಾಂತಗಳಿಗೆ ಪೂರ್ವಗ್ರಹವೇ ಮೂಲ ಕಾರಣ. ಎಂದು ಆಕೆಯ ಅಭಿಪ್ರಾಯ. ಜೀವ ವಿಕಾಸದ ಚಿತ್ರ ಇಂಥಾ ಪೂರ್ವಗ್ರಹಗಳಿಂದ ವಕ್ರವಾಗಿದೆ ಎನ್ನುವ ಈಕೆ. ಬಹಳಷ್ಟು ಟೀಕೆಗೆ ಗುರಿಯಾಗಿದ್ದಾಳೆ. ಈ ರಂಗದ ಪ್ರಮುಖ ಸಂಶೋಧಕರೊಡನೆ ಡಿಕ್ಕಿ ಹೊಡೆದಿದ್ದಾಳೆ.

ಗಂಡುಗಳು ಬಹಳ ದೊಡ್ಡ ಗಾತ್ರದಲ್ಲಿದ್ದು, ಶಕ್ತಿಶಾಲಿಗಳಾಗಿದ್ದು ಮರಿಗಳ ಕಾಟವಿಲ್ಲದ ಕಾರಣ ಬೇಟೆಗೆ ಹೋದರೆಂಬುದು ಬಹಳಷ್ಟು ಮಾನವ ಶಾಸ್ತ್ರಜ್ಞರ ಊಹೆ. ಹೀಗೆಂದೇ ಆದಿ ಮಾನವನ ಸಾಮಾಜಿಕ ಬದುಕಿನ ಚಿತ್ರವನ್ನು ನಿರ್ಧಿಷ್ಟವಾಗಿ ಲಿಂಗಾಧಾರಿತವಾಗಿ ನೀಡಿದರು. ಗಂಡು ಬೇಟೆಯಾಡಿದ, ಆಯುಧಗಳ ಕಂಡುಹಿಡಿದ. ಕಾದು ಕುಳಿತ ಹಸಿದ ಹೆಣ್ಣುಗಳಿಗೆ ಎಳೆದು ತಂದ ಎನ್ನುತ್ತವೆ ಈ ಮೂಲವಾದಗಳು. ಇಂಥಾ ಕಲ್ಪನೆ ಹೆಣ್ಣನ್ನು ಅತ್ಯಂತ ಅಸಹಾಯಕಳನ್ನಾಗಿಸಿ ಗಂಡಿನ ಕೃಪಾಕಟಾಕ್ಷಕ್ಕೆ ಬಿಟ್ಟಿದೆ. ಆಕೆಯ ಬದುಕಿನ ಮೂಲ ಉದ್ದೇಶ ಕೇವಲ ಹೆರುವ ಮತ್ತು ಸೇವೆ ಮಾಡುವುದಷ್ಟೇ ಆಗಿದೆ, 1970ರಲ್ಲಿ ಸ್ಯಾಲ ಲಿಂಟನ್ ಎಂಬ ಮಹಿಳಾ ವಿಜ್ಞಾನಿ ಪ್ರಕಟಿಸಿದ ಮಾನವ ಶಾಸ್ತ್ರದಲ್ಲಿ ಪುರುಷರ ಪೂರ್ವಗ್ರಹ ಎಂಬ ಪ್ರಬಂಧ ಈ ದಿಕ್ಕಿನ ಚಿಂತನೆಗಳಿಗೆ ಪ್ರಶ್ನೆಯಾಗಿದೆ. ಆಕೆ ಹೆಣ್ಣಿನ ಮೇಲಿನ ದಬ್ಬಾಳಿಕೆ ಆಧುನಿಕ ಕಾಲದ ದುರ್ವ್ಯವಸ್ಥೆಯೇ ಹೊರತು. ಪ್ರಕೃತಿ ಸಹಜವಾಗಿ, ನಮ್ಮ ಪ್ರಾಣಿ ಪೂರ್ವಜರ ಕಾಲದಿಂದ ಮೊಳೆತು ಬಂದದ್ದಲ್ಲ ಎಂದಿದ್ದಾಳೆ. ಆದೇ ವರ್ಷ "ಗಂಡು ಬೇಟೆಗಾರ" ಕಲ್ಪನೆಯ ಅನೇಕ ಲೋಪಗಳು ಹೊರಬಿದ್ದವು. ಬೇಟೆಯಾಡಿ, ಆಹಾರ ಒಟ್ಟೈಸಿ, ಜೀವಿಸುವ ದಕ್ಷಿಣ ಆಫ್ರಿಕಾದ !Kung ಸಮಾಜವ ಕುರಿತಂತೆ ಮಾನವ ಶಾಸ್ತ್ರಜ್ಞರು ಪಡೆದ ಅಂಕಿ ಅಂಶಗಳು, ಹೆಣ್ಣು ಬಹಳಷ್ಟು ಸ್ವಾತಂತ್ರ್ಯಳಾಗಿದ್ದುದನ್ನು ತೋರಿಸಿಕೊಟ್ಟವು. ಹೆಣ್ಣು ತಾನು ಶೇಖರಿಸಿದ ಆಹಾರದ ಮೇಲೆ ಪೂರ್ಣ ನಿಯಂತ್ರಣ ಹೊಂದಿದ್ದೂ ತಿಳಿದು ಬಂತು, ರಿಚರ್ಡ್ ಲೀ ಮುಂತಾದ ವಿಜ್ಞಾನಿಗಳ ಅಧ್ಯಯನ, ಈ ಹೆಣ್ಣುಗಳು !Kung ಜನರ ಮೂಲ ಆಹಾರವಾದ ಗೆಡ್ಡೆ-ಗೆಣಸು ಹಣ್ಣುಗಳ ಆರಿಸಿ ತರುತ್ತಿದ್ದರೆಂದು ತಿಳಸಿತು. ಬಹುಶಃ ಮೂಲ ಮಾನವರ ಹೆಣ್ಣುಗಳ ಬದುಕು ಈ !Kung ಹೆಣ್ಣುಗಳಿಗೆ ಹೋಲಿದಂತಿರಬಹುದು ಎಂದು ಅಭಿಪ್ರಾಯ ಪಟ್ಟರು, ಈ ಹೆಣ್ಣುಗಳು ಪಿಳ್ಳೆಗಳ ಕಟ್ಟಿಕೊಂಡು ಮನೆಗೆ ಬಂಧಿಯಾದವರಲ್ಲ. ಬದಲು ಮರಿಗಳೊಡನೆ ಮೈಲಿಗಟ್ಟಲೆ ಅಲೆದಾಡಿ ಆಹಾರಕ್ಕಾಗಿ ಹುಡುಕಾಡಿದವರು. ಈ ಹುಡುಕಾಟದಲ್ಲಿ ಆಫ್ರಿಕಾದ ದಟ್ಟ ಕಾಡುಗಳಲ್ಲಿ ಗಿಡ ಗಂಟೆಗಳ ನಡುವೆ ಗೆಡ್ಡೆ ಗೆಣಸು ಹಣ್ಣುಗಳ ಅಗೆದು. ಹೆಕ್ಕಿ ತೆಗೆಯಲು ಹೆಣ್ಣುಗಳಿಗೆ ಆಯುಧದ ಅವಶ್ಯಕತೆ ಅನಿವಾರ್ಯವಿತ್ತು, ಇಂಥಾ ಆಯುಧಗಳ ಹಿಡಿದು, ಮರಿಗಳ ಕಟ್ಟಿಕೊಂಡು ಅಡ್ಡಾಡುವಾಗ ಕೈಗಳೆರಡನ್ನು ಸ್ವತಂತ್ರ ಮಾಡಿಕೊಳ್ಳುವ ಅಗತ್ಯ ಹೆಚ್ಚಿತ್ತು. ಇದು ಮಾನವ ಶಾಸ್ತ್ರದಲ್ಲಿ ಕೇಳಿಬರುತ್ತಿರುವ ಹೊಸ ವಾದಗಳು,

ಕಾಡು ಬಬೂನ್ಸ್, ಚಿಂಪಾನ್ಸಿಗಳ ಅಧ್ಯಯನದಲ್ಲಿ ಇಪ್ಪತ್ತು ವರ್ಷಗಳ ಕಳೆದ ಬಾರ್ಬರಾ ಸ್ಮಟ್ಸ್, ಮಿಚಿಗನ್ ವಿಶ್ವವಿದ್ಯಾಲಯದ ಮಾನವ ಶಾಸ್ತ್ರದ ಪ್ರಾಧ್ಯಾಪಕಿ. ಸ್ತ್ರೀಪಾದ ಆಕೆಯ ಅಧ್ಯಯನದ ಮೂಲ ದನಿಯಾಗಿವೆ. ನಮ್ಮ ಸಂಪ್ರದಾಯಿಕ ಜೀವ ವಿಕಾಸದ ಥಿಯರಿಗಳು ಗಂಡಿನತ್ತ ಮಾತ್ರ ಕೇಂದ್ರೀಕೃತವಾಗಿ, ಗಂಡಿನ ಗತ್ತಿನ

ಆಕ್ರಮಣಶೀಲ ಸ್ಪರ್ಧಾಭಾವ ಜೀವ ವಿಕಾಸಕ್ಕೆ ಮೂಲ ಕಾರಣ ಎಂದು ಸಾರುತ್ತವೆ. ತನ್ನ ಜೊತೆಯವರೊಡನೆ ಬಡಿದಾಡಿ ಗೆದ್ದ ಗಂಡು ಹೆಚ್ಚು ಹೆಣ್ಣುಗಳೊಡನೆ ಕೂಡಿ ಹೆಚ್ಚು ಮರಿಗಳ ಹುಟ್ಟಿಸಿ, ತನ್ನ ವಂಶವಾಹಿಗಳನ್ನು ಮುಂದಿನ ಜನಾಂಗಕ್ಕೆ ಸಾಗಿಸುತ್ತದೆಂಬುದು ಮೂಲವಾದ ಹೆಣ್ಣು ಗೆದ್ದವನ ಸ್ವತ್ತಾಗಿ. ಗೆದ್ದವನಿಗೆ ಒಪ್ಪಿಸಿಕೊಂಡು ಗೆದ್ದವನ ಕೂಸುಗಳ ಹಡೆದು, ಗೆದ್ದವನ ವಂಶವಾಹಿಗಳ ಮುಂದಿನ ಜನಾಂಗಕ್ಕೆ ವರ್ಗಾಯಿಸುವ ಸಾಧನ ಮಾತ್ರ ಇದು ಪುರುಷ ವಿಜ್ಞಾನಿಗಳು ನೀಡಿರುವ ಚಿತ್ರ. ಅವರ ಕಣ್ಣಿಗೆ ಜೀವ ವಿಕಾಸದ ಹಾದಿಯಲ್ಲಿ ಹೆಣ್ಣಿನ ಪಾತ್ರ ಕಾಣಲೇ ಇಲ್ಲ, ಹೆಣ್ಣು ಪೂರ್ಣ ಅದೃಶ್ಯಳು. ತನ್ನ ವಂಶ ವಾಹಿಗಳನ್ನು ಕೊಡುವುದಲ್ಲದೆ, ಮರಿಗಳ ಪೋಷಿಸಿ ಮುಂದಿನ ಜನಾಂಗವನ್ನು ರೂಪಿಸುವ ಹೆಣ್ಣಿಗೆ, ತನಗೆ ತಕ್ಕ ಲೈಂಗಿಕ ಜೊತೆಗಾರನನ್ನು ಆಯ್ದುಕೊಳ್ಳುವಲ್ಲಿ, ಮುಂದಿನ ಜನಾಂಗದ ನಿರ್ಮಾಣದಲ್ಲಿ ಪಾತ್ರವಿತ್ತೆಂದು ಹತ್ತೊಂಬತ್ತನೇ ಶತಮಾನದ ವಿಜ್ಞಾನಿಗಳು ಯೋಚಿಸಲೇ ಇಲ್ಲ. ಇದೀಗ ಬಾರ್ಬರಾ ಸ್ಮಟ್ಸ್‌ಳ ಕಟು ಪರಿಶ್ರಮದ "ಫೀಲ್ಡ್ ವರ್ಕ್, ಇಂಥಾ ಸಾಂಪ್ರದಾಯಿಕ ನಂಬಿಕೆಗಳ ಮುಖಕ್ಕೆ ಹೊಡೆದಂತಿದೆ. ಆಫ್ರಿಕಾದ ಕಾಡುಗಳಲ್ಲಿ ಬೆಳಗಿನಿಂದ ಕತ್ತಲವರೆಗೆ ಕಾಡು ಬಬೂನ್‌ಗಳ ಹಿಂಬಾಲಿಸಿ ಅವುಗಳ ನಡುವೆ ಗಂಟೆಗಟ್ಟಲೆ ಕುಳಿತು ಅವುಗಳ ಪ್ರತಿ ಕ್ಷಣದ ಪ್ರತಿ ಚಲನವಲನವ ವೀಕ್ಷಿಸಿದ ಈಕೆಯ "ಫೀಲ್ಡ್ ವರ್ಕ್" ಜೀವ ವಿಕಾಸದ ಹಾದಿಯತ್ತ ಬಹಳಷ್ಟು ಬೆಳಕು ಚೆಲ್ಲಿದೆ. ಹೆಣ್ಣುಗಳು ಸುಮ್ಮನೆ ಕುಳಿತು ಗಂಡುಗಳಿಗೆ ಒಪ್ಪಿಸಿಕೊಳ್ಳದೇ, ತಮ್ಮ ಜೊತೆಗಾರರನ್ನು ಆರಿಸಿಕೊಂಡದ್ದನ್ನು ತೋರಿಸಿದೆ. ಒಂದು ಹೆಣ್ಣು ಬಬೂನ್ ನಲವತ್ತೆರಡು ಬಾರಿ, ತನ್ನ ಮೇಲೇರಲು ಪ್ರಯತ್ನಿಸಿದ ಗಂಡನ್ನು ತಿರಸ್ಕರಿಸಿ, ತನಗಿಷ್ಟವಾದ ಗಂಡಿನೊಡನೆ ಕೂಡಿದ ದೃಶ್ಯವನ್ನು ಬಾರ್ಬರಾ ದಾಖಲಿಸಿದ್ದಾಳೆ. ಇಂಥಾ ಅನೇಕ ದೃಶ್ಯಗಳ ಅವಲೋಕನ ಹೆಣ್ಣಿನ ಆಯ್ಕೆಯ ವಿಷಯವನ್ನು, ನಿರ್ಣಯದ ಹಕ್ಕನ್ನು ಸ್ಪಷ್ಟಪಡಿಸುತ್ತಿದೆ. ಗಂಡು, ಹೆಣ್ಣಿಗೆ ಒಲಿಸುವ ಪ್ರಯತ್ನಗಳೂ ಹೊರ ಬಂದಿವೆ. ಹಲವಾರು ಬಾರಿ ಗಂಡು ಬಬೂನ್‌ಗಳು, ತಾವು ಲೈಂಗಿಕ ಸಂಬಂಧ ಹೊಂದಿಲ್ಲದ ಹೆಣ್ಣುಗಳೊಡನೆ ವಾತ್ಸಲ್ಯದ ಸಂಬಂಧವ ಬೆಳೆಸಿಕೊಂಡು. ಅವುಗಳೊಡನೆ ಲಲ್ಲೆಗರೆದು. ತನ್ನವಲ್ಲದ ಅವುಗಳ ಮರಿಗಳ ಸಂರಕ್ಷಣೆಗೂ ಧಾವಿಸಿದ ಸಂದರ್ಭಗಳನ್ನು ಉಲ್ಲೇಖಿಸುತ್ತಾಳೆ. ಈ ಗಂಡುಗಳು ಹೆಣ್ಣನ್ನು ಒಲಿಸಲು ಪಡುವ ಪಾಡುಗಳತ್ತ ಬೆರಳಿಟ್ಟು, ತಾನು ಕೂಡುವ ಗಂಡನ್ನು ಆಯ್ದುಕೊಳ್ಳುವ ಶಕ್ತಿ ಈ ಹೆಣ್ಣುಗಳಿಗಿದೆಯೆಂದು ತೋರಿಸಿದ್ದಾಳೆ. ಇಂಥಾ ಅವಲೋಕನಗಳು ಮಾನವ ಶಾಸ್ತ್ರದ ಮೂಲ ಸಿದ್ಧಾಂತಗಳಾದ ಗಂಡು ಹೆಣ್ಣಿನೊಡನೆ ಸಂಭೋಗಕ್ಕೆ ಮಾತ್ರ ಕೂಡಿ. ತನ್ನ ವಂಶ ವಾಹಿಗಳ ಹೊತ್ತ ಮರಿಗಳನ್ನು ಮಾತ್ರ ಸಂರಕ್ಷಿಸುವುದೆಂಬ ವಾದಗಳಿಗೆ ಪೂರ್ಣ ವಿರೋಧವಿದೆ.

ಅಂತೂ ಇಂದು ಮಹಿಳಾ ವಿಜ್ಞಾನಿಗಳು ಮಾನವ ಶಾಸ್ತ್ರದಲ್ಲಿ ಬಹಳಷ್ಟು ವಾದ ವಿವಾದಗಳ ಎಬ್ಬಿಸಿದ್ದಾರೆ, ಇದುವರೆಗೂ ಪರಮ ಸತ್ಯವೆಂದು ನಂಬಿ ಬಂದ ಸಿದ್ಧಾಂತಗಳ ಪ್ರಶ್ನಿಸುತ್ತಿದ್ದಾರೆ. ತಮ್ಮ ಅಧ್ಯಯನ-ಸಂಶೋಧನೆಯ ಆಧಾರದ ಮೇಲೆ ಮೂಲ ಮಾನವನ ಪೂರ್ಣ ಚಿತ್ರವನ್ನು ನೀಡಲು, ಜೀವ ವಿಕಾಸದಲ್ಲಿ ಗಂಡು ಹೆಣ್ಣಿನ ಪಾತ್ರವನ್ನು ಅರ್ಥೈಸಲು ಪ್ರಯತ್ನಿಸುತ್ತಿದ್ದಾರೆ.

ಸ್ತ್ರೀವಾದವನ್ನು ಸಾಹಿತ್ಯದಲ್ಲಿ. ಕಲೆಯಲ್ಲಿ ಕಾಣುವ ನಾವು ಸ್ತ್ರೀವಾದದ ಅಗತ್ಯ ವಿಜ್ಞಾನಕ್ಕೂ ಇರುವುದು ಪರಿಗಣಿಸಿರಲಿಲ್ಲ. ಪೂರ್ವಗ್ರಹಗಳು ವೈಜ್ಞಾನಿಕ ಸತ್ಯಗಳ ಮರೆಮಾಚಬಲ್ಲವು, ವೈಜ್ಞಾನಿಕ ಸತ್ಯಗಳಿಗೆ ಕುರುಡಾಗಬಲ್ಲವು, ಎಂಬ ಸತ್ಯವನ್ನು ಮಹಿಳಾ ಮಾನವ ಶಾಸ್ತ್ರಜ್ಞರು ಇದೀಗ ಜಗತ್ತಿಗೆ ತೋರಿಸಲು ಪ್ರಯತ್ನಿಸುತ್ತಿದ್ದಾರೆ. O

## ಕವನ

# ಅನಾಥಾಶ್ರಮದ ಹುಡುಗಿಯರು

ಲೆಕ್ಕವಿಲ್ಲದಷ್ಟು ಹೂಗಳು
ಅರಳುತ್ತವೆ ಸುಂದರವಾಗಿ
ದಟ್ಟ ಕಾಡಿನ ಮಧ್ಯೆ
ಕೊಳ್ಳ ಕಣಿವೆಯ ನಡುವೆ
ಬೆಟ್ಟ ಗುಡ್ಡಗಳ ಮೈಮೇಲೆ .........
ಎಲ್ಲೆಂದರಲ್ಲಿ ಹುಟ್ಟಿ
ನೀರು ಸಾರವಿಲ್ಲದೆಯೂ ದಟ್ಟೈಸಿ
ಬೆಳೆದ ಮುಳ್ಳು ಕಂಟಿಗಳಲ್ಲಿ
ಕಂಪ ಸೂಸುತ್ತ ನಗುತ್ತವೆ.

ಸುಡುವ ಸೂರ್ಯಗೆದೆ ತೆರೆದು
ಬಿರುಗಾಳಿಗೆ ಮುಖವೊಡ್ಡಿ
ಸಂಜೆ ಚಂದ್ರನ ತಂಪಿನನುಭವದ
ಹಿತಕ್ಕೆ ಕಾತರಿಸಿ ಕಾಯುತ್ತವೆ
ಹಾರಿಬಾರದ ದುಂಬಿಗಳ
ಇಂಪುನಾದದ ಮೋಡಿಗೆ
ಕಿವಿಯಗಲಿಸಿ ಕಾಯುತ್ತವೆ
ಆಸೆಬಾಡದ ಹೂಗಳು
ಮೌನವಾಗಿ ನರಳುತ್ತವೆ

ಎದೆಯ ಹೊಂಗನಸನೆಲ್ಲ
ವಿಧಿಯ ಹೋಮವಾಗ್ನಿತ್ತು
ನಿಸರ್ಗ ದೇವಿಗಾಹುತಿ ನೀಡುತ್ತವೆ
ಮೆಲ್ಲನೆ ಮಣ್ಣಿಗುರುಳುತ್ತವೆ.

❋ ಟಿ. ಸಿ. ಪೂರ್ಣಿಮಾ

(6ನೇ ಪುಟದಿಂದ ಮುಂದುವರಿಕೆ)

ಸಿರಿ ಜಾತ್ರೆಯಲ್ಲಿನ ಹೆಂಗಳೆಯರು ಒಮ್ಮೆ ಪಾಡ್ದನ ಖಜಾನೆ ತೆಗೆದರೆ ಇಡೀ ಹೆಣ್ಣು ಕುಲದ ನೋವುಗಳು ರಾಗಮಾಲಿಕೆಗಳಂತೆ ಹೊರಚಿಮ್ಮುತ್ತವೆ. ರಾಗವಾಗಿ ಪಾಡ್ದನಗಳನ್ನು ಹಾಡುತ್ತಲೇ ಹೆಂಗಳೆಯರು ತಮ್ಮ ನೋವುಗಳನ್ನು ಹೊರಗಿಡುತ್ತಾರೆ. ಇಂತಹ ಅಪರೂಪದ ಅಭಿವ್ಯಕ್ತಿಗೆ ಸಿರಿ ಜಾತ್ರೆಯೇ ಅವಕಾಶ ನೀಡಿದ್ದು ಹೇಗೆ? ಎಂಬುದೇ "ಸಿರಿ"ಯ ವೈಶಿಷ್ಟ್ಯವನ್ನೂ ಸಾರುತ್ತದೆ.

ತುಳುನಾಡಿನ ಬೆರ್ಮ ಆಳ್ವ ಎಂಬ ವೃದ್ಧನಿಗೆ ಎಷ್ಟು ದಿನವಾದರೂ ಮಕ್ಕಳಾಗಲಿಲ್ಲ. ತನ್ನೊಂದಿಗೆ ನಲಿದಾಡಲು ಒಂದು ಮಗುವೂ ಇಲ್ಲವೆ ಎಂದು ಹಲುಬುತ್ತಿದ್ದ ಆಳ್ವನ ಮನೆ ಬಾಗಿಲಿಗೆ ಒಮ್ಮೆ ಬ್ರಹ್ಮ ಬಿಕ್ಷುಕನ ವೇಷ ಧರಿಸಿ ಬರುತ್ತಾನೆ. ಬಿಕ್ಷೆ ನೀಡುವಾಗ ಬ್ರಹ್ಮನು ನೀನು ದೇವಸ್ಥಾನಗಳನ್ನು ಪಾಳು ಬಿಟ್ಟದ್ದೀಯ ಆದ್ದರಿಂದಲೇ ನಿನಗೆ ಸಂತಾನ ಫಲವಿಲ್ಲದಂತಾಗಿದೆ ಎಂದು ಹೇಳುತ್ತಾನೆ. ತಕ್ಷಣವೇ ಬೆರ್ಮ ಆಳ್ವ ದೇವಸ್ಥಾನದ ಜೀರ್ಣೋದ್ಧಾರ ಮಾಡಿಸುತ್ತಾನೆ. ತನ್ನ ದೇವತೆಗೆ ಬೆರ್ಮ ಆಳ್ವ ಹಿಂಗಾರವನ್ನು ಅರ್ಪಿಸುತ್ತಾನೆ, ಈ ಹಿಂಗಾರದ ಒಡಲಲ್ಲಿ ಹೆಣ್ಣು ಮಗು ಕಾಣಿಸಿಕೊಳ್ಳುತ್ತದೆ. ಇದಕ್ಕೆ ಬೆರ್ಮ ಆಳ್ವ ಸುಖ ಸಂತೋಷ ನಲಿವಿನ ಪ್ರತೀಕವಾಗಿ "ಸಿರಿ" ಎಂದು ಹೆಸರಿಡುತ್ತಾನೆ.

ನಂತರ ಈ ಸಿರಿ ಐದು ವರ್ಷದವಳಾದಾಗ ಇವಳನ್ನು ನೆರೆಯ ಕಾಂತ ಆಳ್ವನಿಗೆ ಸಾಕಷ್ಟು ಭೂಮಿ, ಸಂಪತ್ತು ನೀಡಿ ಮದುವೆ ಮಾಡುತ್ತಾನೆ. ಕಾಂತ ಆಳ್ವನಿಗೆ ಮೊದಲಿನಿಂದಲೂ ವೇಶ್ಯೆಯರ ಸಹವಾಸವಿರುತ್ತದೆ, ಬೇರೊಬ್ಬ ಹೆಣ್ಣಿನ ಮಗ್ಗುಲಲ್ಲಿ ಈತ ಸಿರಿಯನ್ನು ಕಡೆಗೊಳಿಸುತ್ತಾನೆ. ಹೆಂಡತಿಯ ಮನಸ್ಸನ್ನು ಅರ್ಥಮಾಡಿಕೊಳ್ಳಲು ಹಿಂದೇಟು ಹಾಕುತ್ತಾನೆ. ಸಿರಿ "ಕುಮಾರ"ನಿಗೆ ಜನ್ಮ ನೀಡುತ್ತಾಳೆ. ಆಗಲೂ ಕಾಂತ ಆಳ್ವ ಅವಳನ್ನು ಕಡೆಗಣಿಸುತ್ತಾನೆ. "ಸಿರಿ ತನ್ನ ಗಂಡನು ಭೂಮಿ ಹಾಳಾಗಲಿ" ಎಂದು ಶಾಪ ನೀಡುತ್ತಾಳೆ.

ಗಂಡನ ತಾತ್ಸಾರ, ತಂದೆಯ ಮರಣದಿಂದ ಸಿರಿ ಬೀದಿಗೆ ಬೀಳುತ್ತಾಳೆ. ಹೀಗಿರುವಾಗ ಇಬ್ಬರು ಕ್ಷತ್ರಿಯರು ಅವಳ ಬೆಂಬತ್ತಿ ಬರುತ್ತಾರೆ ಅವಳನ್ನು ಪೀಡಿಸುತ್ತಾರೆ ನಂತರ ಈಕೆಯ ಒಳ್ಳೆ ಗುಣಗಳನ್ನು ಅರಿತು ಇವಳನ್ನು ಕೊಡ್ಸರಾಳ್ವನಿಗೆ ಕೊಟ್ಟು ಮದುವೆ ಮಾಡುತ್ತಾರೆ. ನಂತರ ಸಿರಿ ಸೊನ್ನೆ ಎಂಬ ಮಗಳಿಗೆ ಜನ್ಮ ನೀಡಿ ಅದೃಶ್ಯಳಾಗುತ್ತಾಳೆ.

ಬಹು ಪುರಾತನವಾದ ಈ ಕಥೆಯಲ್ಲಿಯೇ ಹೆಣ್ಣು ಈ ಸಮಾಜದ ಮಧ್ಯೆ ಬದುಕುತ್ತಿರುವ ಸ್ಥಿತಿ ವ್ಯಕ್ತವಾಗುತ್ತದೆ. ಬಾಲ್ಯ ವಿವಾಹ, ವರದಕ್ಷಿಣೆ, ಗಂಡನಿಂದ ಶೋಷಣೆ, ಅನಾದಾರ, ಮರು ಮದುವೆ ಇತ್ಯಾದಿಗಳು ಈ ಕಥೆಯಲ್ಲಿ ಅಡಗಿವೆ ಇಂದಿನ ಈ ಸಮಾಜವೂ ಎಲ್ಲದರಿಂದ ಹೊರತಾಗಿಲ್ಲ. ಹೀಗಾಗಿಯೇ "ಸಿರಿ" ಹೆಂಗಳೆಯರ ಸಮುದಾಯದ ಪ್ರತಿನಿಧಿಯಾಗಿ ಉಳಿದಿದ್ದಾಳೆ.

ಸಿರಿ ಮೂಲತಃ ಬಂಟರ ದೇವತೆಯಾದರೂ ಸಹ ಎಲ್ಲಾ ವರ್ಗಗಳೂ ಇವಳನ್ನು ಪೂಜಿಸುತ್ತಾರೆ. ಸಿರಿ ಮಾತೃ ಪ್ರಧಾನ ವ್ಯವಸ್ಥೆಯ ಪಳೆಯುಳಿಕೆಯೇ ಎನ್ನಬಹುದು. ಪುರುಷ ಮತ್ತು ಮಾತೃ ವ್ಯವಸ್ಥೆಯ ಸಂಘವನ್ನು ಸಿರಿ ಕಥೆ ಅಭಿವ್ಯಕ್ತಿಸುತ್ತದೆ.

ಸಿರಿ ಆಚರಣೆ ಕೇವಲ ಹಿರಿಯಡ್ಕದಲ್ಲಿ ಮಾತ್ರವೇ ಅಲ್ಲದೆ ಹಲವು ಊರುಗಳಲ್ಲಿ ನಡೆಯುತ್ತದೆ. ನೆರೆಯ

ಹತ್ತಾರು ಊರುಗಳಿಂದ ಜನ ಜಾತ್ರೆಗೆ ಬಂದಿಳಿಯುತ್ತಾರೆ ಅಂದು ಮಹಿಳೆಯರ ಮಾತೇ ಮೇಲುಗೈ ಪಡೆಯುತ್ತದೆ.

ಪಾಡ್ದನ ಹಾಡಲು ಆರಂಭಿಸುವ ಮಹಿಳೆಯರು ನೋವಿನ ರಾಗ ಹೊರಡಿಸುತ್ತಾರೆ. ಸಿರಿಯ ಐತಿಹ್ಯವನ್ನು ಪಾಡ್ದನಗಳಲ್ಲಿ ಬಿಚ್ಚುತ್ತಾ ಹೋಗುವ ಇವರು ಸಿರಿ ಅನುಭವಿಸಿದ ನೋವು ಯಾತನೆಗಳ ಜೊತೆ ತಾವು ಅನುಭವಿಸಿದ ನೋವುಗಳೂ ಹೊರ ಚಿಮ್ಮಿ ಕಣ್ಣೀರಿಡುತ್ತಾರೆ. ಒಬ್ಬರು ಇನ್ನೊಬ್ಬರನ್ನು ತಬ್ಬಿಕೊಂಡು ಸಾಂತ್ವನಕ್ಕೆ ಹಾತೊರೆಯುತ್ತಾರೆ. ಸಿರಿ ಐತಿಹ್ಯ ಹೇಳುತ್ತಾ ಒಬ್ಬರು ಸಿರಿಯಾದರೆ ಮತ್ತೊಬ್ಬರು ಆಕೆಯ ಮಗಳು ಸೊನ್ನೆಯಾಗುತ್ತಾರೆ. ಗುಂಪಿನಲ್ಲಿರುವ ಗಂಡಸು ಮಗ ಕುಮಾರನಾಗುತ್ತಾನೆ. ಹೀಗೆ ರಾತ್ರಿಯಿಡೀ ಹಲವು ರಾತ್ರಿಗಳ ಸಿರಿಯ ಕಥಾನಕ ಸಾಗುತ್ತದೆ. ಸಿರಿಯ ಜಾತ್ರೆ ಎಂಬುದು ಕಣ್ಣೀರಿನ ನೋಟ ಎನ್ನುವಂತಾಗುತ್ತದೆ.

ಮಹಿಳೆಯರಿಗೆ ಇಂತಹ ದನಿ ನೀಡುವ ಆಚರಣೆ ಕೇವಲ ಹಿರಿಯಡ್ಕದಲ್ಲಿ ಮಾತ್ರವೇ ಅಲ್ಲಿದೆ ಇಡೀ ದಕ್ಷಿಣ ಏಶ್ಯಾದಲ್ಲಿ ಮಹಿಳೆಯರು ಎಲ್ಲೆಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಶೋಷಣೆ ಅನುಭವಿಸುತ್ತಿದ್ದಾರೋ ಅಲ್ಲೆಲ್ಲಾ ಒಂದಲ್ಲಾ ಒಂದು ರೀತಿಯಲ್ಲಿ ಇಂತಹದೇ ಅಭಿವ್ಯಕ್ತಿ ಕ್ರಮವನ್ನು ಕಂಡುಕೊಂಡಿದೆ, ಎನ್ನುವುದು ಸಮಾಜ ಶಾಸ್ತ್ರಜ್ಞರ ಅಭಿಪ್ರಾಯ.

"ಮಾತೃ ವಂಶೀಯ ಕುಟುಂಬ ವ್ಯವಸ್ಥೆಯ ಸಮಸ್ಯೆಗೆ ಒಳಗಾದ ಅಪಾರ ಸಂಖ್ಯೆಯ ಮಹಿಳೆಯರನ್ನು ತಲೆಹಾಕಿ ಒಂದು ವ್ಯವಸ್ಥಿತ ನಿರಂತರ ಕೂಟವನ್ನಾಗಿಸುವ ಸಾಮರ್ಥ್ಯವು ಸಿರಿ ಪಾಡ್ದನದ ಹೆಚ್ಚುಗಾರಿಕೆಯಾಗಿದೆ" ಎಂದು ಖ್ಯಾತ ಮಾನವ ಶಾಸ್ತ್ರಜ್ಞ ಪೀಟರ್ ಜೆ. ಕ್ಲಾಸ್ ಅಭಿಪ್ರಾಯಪಡುತ್ತಾರೆ.

ಸಿರಿ ಜಾತ್ರೆ ಇಂದಿಗೂ ತನ್ನ ವೈಭವವನ್ನ ಪಡೆದು ಕೊಂಡೇ ಸಾಗುತ್ತಿದೆ. ಮುಖ್ಯ ಕಾರಣ ಇಂತಹ ನೋವುಗಳು ಸಮಸ್ಯೆಗಳು ನಮ್ಮ ಸಮಾಜದಿಂದ ಇನ್ನೂ ದೂರವಾಗಿಲ್ಲದಿರುವುದು.

ಸಿರಿ ಜಾತ್ರೆಯಲ್ಲಿ ಹೆಂಗಳೆಯರು ಆವೇಶ ತುಂಬಿದಾಗ ಇತರ ಮನೆಯವರ ಸಮಸ್ಯೆಗಳಿಗೆ ಪರಿಹಾರವನ್ನೂ ಹೇಳುತ್ತಾರೆ, ಹೀಗಾಗಿ ನೋವುಗಳನ್ನು ಕಂಡುಂಡ ಕುಟುಂಬಗಳು ಈ ಸಿರಿ ಜಾತ್ರೆಗೆ ಬಂದು ಪರಿಹಾರ ಕಂಡುಕೊಳ್ಳಲು ಯತ್ನಿಸುತ್ತಾರೆ. ಆದರೆ ಇತ್ತೀಚಿನ ಆಚರಣೆಗಳಲ್ಲಿ ಮೈ ತುಂಬಿದ ಹೆಂಗಳೆಯರನ್ನು ಸಹ ಇದೇ ರೀತಿ ಪರಿಹಾರ ಹೇಳು ಎಂದು ಪುರುಷರು ತಮ್ಮ ಅಧಿಕಾರ ಚಲಾಯಿಸುವುದನ್ನೂ ನೋಡಬಹುದು.

"ಹೋದೆಯಾ ಪಿಶಾಚಿ ಎಂದರೆ ಬಂದೆ ಗವಾಕ್ಷೀಲಿ" ಎಂಬಂತೆ ಪುರುಷರ ನಿರಂತರ ಶೋಷಣೆಯಿಂದ ಪಾರುಗಲು ಒಂದು ಅಭಿವ್ಯಕ್ತಿ ಕ್ರಮವನ್ನು ನೀಡುವ ಈ ಜಾತ್ರೆಯಲ್ಲಿ ಮತ್ತೆ ಅವರದೇ ಕಾರುಬಾರು. O

# ಕಾನೂನು ಸಲಹೆ

✱ ಹೇಮಲತಾ ಮಹಿಷಿ

---

ಪ್ರಶ್ನೆ : ನನ್ನ ನಾದಿನಿಗೆ ಮದುವೆಯಾಗಿ ನಾಲ್ಕು ವರ್ಷಗಳಾಗಿವೆ. ಅವಳಿಗೆ ಮೂರು ವರ್ಷದ ಮಗುವಿದೆ. ಅವಳ ಗಂಡ ಒಳ್ಳೆಯ ನೌಕರಿಯಲ್ಲಿದ್ದರೂ ಕೆಲಸಕ್ಕೆ ಸರಿಯಾಗಿ ಹೋಗದಿರುವುದರಿಂದ ಕೈಗೆ ಏನೂ ಸಂಬಳ ಬರುವುದಿಲ್ಲ. ಅವನಿಗೆ ಎಲ್ಲಾ ದುಶ್ಚಟಗಳೂ, ದುಷ್ಟ ಸಹವಾಸಗಳೂ ಇವೆ. ಅವರು ವಾಸಿಸುವುದು ಅವಿಭಕ್ತ ಕುಟುಂಬದಲ್ಲಿ. ನನ್ನ ನಾದಿನಿಗೆ ನಾವು ಕೊಟ್ಟ ಎಲ್ಲಾ ಚಿನ್ನ, ಬೆಳ್ಳಿ, ಹಣವನ್ನು ಕೂಡ ಅವನು ಕಸಿದಿದ್ದಾನೆ. ಅವನ ಕಾಟ ತಾಳಲಾರದೆ ಅವಳೇ ತೌರುಮನೆಗೆ ಓಡಿ ಬಂದಿದ್ದಾಳೆ. ಈಗ ಅವಳ ಮಗುವಿನ ಜೀವನ ನಿರ್ವಹಣೆಯನ್ನು ಎಷ್ಟು ದಿನ ತೌರು ಮನೆಯವರು ಮಾಡಬಲ್ಲರು ? ಅವನಿಗೆ ಸಂಪಾದನೆ ಇಲ್ಲದಿರುವುದರಿಂದ ನಿರ್ವಹಣಾ ಭತ್ಯೆಗೆ ಪ್ರಯತ್ನಿಸಲು ಸಾಧ್ಯವೇ ? ಅವನ ತಂದೆ ಇನ್ನೂ ಸರ್ಕಾರಿ ಕೆಲಸದಲ್ಲಿದ್ದಾರೆ, ಸ್ವಂತ ಮನೆ ಇದೆ. ಹೀಗಿರುವಾಗ ಸೊಸೆಯನ್ನು. ಮೊಮ್ಮಗುವನ್ನು ನೋಡಿಕೊಳ್ಳುವ ಜವಾಬ್ದಾರಿ ಅವರಿಗೆ ಇರುವುದಿಲ್ಲವೇ ?

ಉತ್ತರ : ನಿಮ್ಮ ನಾದಿನಿಗೆ ಮದುವೆಯಲ್ಲಿ ಕೊಟ್ಟ ಚಿನ್ನ, ಬೆಳ್ಳಿಗಳು ಇನ್ನೂ ಗಂಡನ ಮನೆಯಲ್ಲಿ ಉಳಿದಿದ್ದರೆ ಅವುಗಳನ್ನು ಜಪ್ತಿ ಮಾಡಿಸಬಹುದು. ಜೀವನ ನಿರ್ವಹಣಾ ಭತ್ಯೆಯ ಬಗ್ಗೆ ಹೇಳುವುದಾದರೆ ಮಾವನಿಗೆ ಸೊಸೆಯ ಬಗ್ಗೆ ಅಂತಹ ಯಾವುದೇ ಹೊಣೆಗಾರಿಕೆ ಇರುವುದಿಲ್ಲ. ಆದರೆ ಸ್ವಂತ ಮನೆ ಪಿತ್ರಾರ್ಜಿತವಾಗಿದ್ದರೆ ಗಂಡನ ವಿರುದ್ಧ ಜೀವನಾಂಶದ ಆದೇಶವನ್ನು ನ್ಯಾಯಾಲಯದಿಂದ ಪಡೆದು ಮನೆಯ ಮೇಲೆ ಅದರ "ಚಾರ್ಜ್" ಹಾಕಬಹುದು, ಗಂಡನಿಗಿರುವ ಪಾಲನ್ನು ವಠಾರಾಟಕ್ಕೆ ತರಬಹುದು. ಗಂಡನಿಗೆ ಕೆಲಸ–ಸಂಬಳ ಇಲ್ಲದಿದ್ದರೂ ಜೀವನಾಂಶದ ಬಗ್ಗೆ ಅವನ ವಿರುದ್ಧ ಆಜ್ಞೆಯನ್ನು ಪಡೆದು ಮುಂದೆ ಏನಾದರೂ ಅವನು ಕೆಲಸಕ್ಕೆ ಸೇರಿದ್ದಲ್ಲಿ, ಅವನಿಗೆ ಆಸ್ತಿ ಸಿಕ್ಕಲ್ಲಿ, ಅದರಿಂದ ಜೀವನಾಂಶದ ಬಾಕಿಯನ್ನು ವಸೂಲು ಮಾಡಬಹುದು. ಆದರೆ ಈಗಿರುವ ಕಾನೂನಿನ ಪ್ರಕಾರ, ಹೆಂಡತಿ ಕೆಲಸದಲ್ಲಿದ್ದು ಗಂಡ ಕೆಲಸದಲ್ಲಿಲ್ಲದಿದ್ದರೂ ಅವನು ಹೆಂಡತಿಯಿಂದ ಜೀವನಾಂಶ ಕೇಳಬಹುದು, ಎಂಬುದನ್ನು ನೆನಪಿನಲ್ಲಿಡಬೇಕು.

ಪ್ರಶ್ನೆ ; ನಮ್ಮ ಕಛೇರಿಯ ಜವಾನ ಶ್ರೀನಿವಾಸ, ಅವನ ಮಗಳು ಲಕ್ಷ್ಮಿಯನ್ನು ಅವಳಿಗೆ ಹದಿನೇಳು ವರ್ಷವಿರುವಾಗಲೇ ಮದುವೆ ಮಾಡಿದ್ದಾನೆ. ಮದುವೆಯಾಗಿ ಇನ್ನೂ ಮೂರು ತಿಂಗಳಿರುವಾಗಲೇ ಅತ್ತೆಯ ಮನೆಯವರು "ಹುಡುಗಿ ಸರಿಯಿಲ್ಲ" ಎಂಬ ನೆಪವೊಡ್ಡಿ ತೌರು ಮನೆಗೆ ಅಟ್ಟಿಬಿಟ್ಟಿದ್ದಾರೆ. ಈ ಸಂಬಂಧದಲ್ಲಿ ಕಾನೂನಿನ ಕ್ರಮ ಏನು ತೆಗೆದುಕೊಳ್ಳಬೇಕು ?

ಉತ್ತರ : ಹುಡುಗಿಗೆ ಹದಿನೈದು ವರ್ಷ ತುಂಬುವ ಮೊದಲೇ ವಿವಾಹ ಮಾಡಿಕೊಟ್ಟಿದ್ದಲ್ಲಿ, ಅವಳು ತನಗೆ 18 ವರ್ಷ ತುಂಬುವ ಮೊದಲು ಆ ಮದುವೆಯನ್ನು ಧಿಕ್ಕರಿಸಿ ಆ ಕಾರಣದ ಮೇಲೆ ವಿವಾಹ ವಿಚ್ಛೇದನ ಪಡೆಯಬಹುದಿತ್ತು. ಬಾಲ್ಯ ವಿವಾಹ ನಿಷೇಧ ಕಾನೂನಿನ ಕೆಳಗೆ ಹುಡುಗಿಗೆ 18 ವರ್ಷ ತುಂಬುವ ಮೊದಲು ವಿವಾಹ ಮಾಡಿಕೊಡುವುದು, ಮಾಡಿಸುವುದು, ಅಂತಹ ಹುಡುಗಿಯನ್ನು ವಿವಾಹವಾಗುವುದು ಅಪರಾಧವಾದರೂ ನಡೆದ ವಿವಾಹ ಅನೂರ್ಜಿತವೆನಿಸುವುದಿಲ್ಲ. ಇನ್ನೂ ಅಂತಹ ವಿವಾಹ ನಡೆದಿರದಿದ್ದಲ್ಲಿ ನಿರ್ಬಂಧ ಕಾಜ್ಞೆಯನ್ನು ಪಡೆದು ಅಂತಹ ಬಾಲ್ಯ ವಿವಾಹವನ್ನು ತಡೆಗಟ್ಟಬಹುದು. ಈಗ ಲಕ್ಷ್ಮಿಗೆ ಇರುವ ಮಾರ್ಗವೆಂದರೆ, ಗಂಡ ತನ್ನೊಂದಿಗೆ ವೈವಾಹಿಕ ಜೀವನ ನಡೆಸಬೇಕೆಂದು ಕೇಳಿ ಅರ್ಜಿ ಹಾಕುವುದು. (For restitution of conjugal righrs) ಅಥವಾ ಕ್ರೌರ್ಯದ ಕಾರಣದ ಮೇಲೂ ವಿವಾಹ ವಿಚ್ಛೇದನ ಕೇಳಬಹುದು. ವಿವಾಹ ವಿಚ್ಛೇದನಕ್ಕಾಗಿ ಅರ್ಜಿ ಹಾಕಲು ವಿವಾಹವಾಗಿ ಒಂದು ವರ್ಷ ಕಳೆದಿರಬೇಕು. ಅದಕ್ಕೆ ಮೊದಲು ಹಾಕಲು ಬರುವುದಿಲ್ಲ.

Statement about Ownership and other particulars about Newspaper ACHALA

FORM IV (See Rule 8)

1 Place of Publication : Bangalore
Karnataka State

2 Periodicity of its Publication : Bi-Monthly

3 Printers Name : Dr. G. Ramakrishna
for Printswell
Bangalore

Nationality : Indian

Address : 26, 1st Main Road
Vyalikaval Bangalore-3

4 Publisher's Name: Dr. G. Ramakrishna
for Jagruthi Mahila
Adhyayana Kendra
Bangalore

Nationality : Indian

Address : 26, 1st Main Road
Vyalikaval Bangalore-3

5 Editor's Name : N. Gayathri

Nationality : Indian

Address : 26, 1st Main Road
Vyalikaval Bangalore-3

6 Name & Address of individuals who own the Newspaper: Dr. G. Ramakrishna
26, 1st Main Road
Vyalikaval
Bangalore-560 003

I Dr. G. Ramakrishna, here by declare that the particulars given above are true to the best of my knowledge and belief.

Bangalore — Sd/–

Date : 1-3-1992 — Dr. G. Ramakrishna

*Reg. No. MAG (5) PRC. DECL 036/86-87*

BOOK-POST/PERIODICALS

To,

If undelivered please return to :

**Jagruthi Mahila Adhyayana Kendra**
26, 1st Main Road, Vyalikaval
Bangalore-560 003